ಉಪನ್ಯಾಸ ಗ್ರಂಥಮಾಲೆ

೭೪

# ಪುರಾಣ ಜಿಜ್ಞಾಸೆ

ಡಾ॥ ಎಲ್. ಆರ್. ಹೆಗಡೆ, ಎಂ.ಎ., ಪಿಎಚ್.ಡಿ.



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಏಪ್ರಿಲ್, ೧೯೭೬

ಉಪನ್ಯಾಸ ಗ್ರಂಥಮಾಲೆ

೭೪

# ಪುರಾಣ ಜಿಜ್ಞಾಸೆ

ಡಾ. ಎಲ್. ಆರ್. ಹೆಗಡೆ, ಎಂ.ಎ., ಪಿಎಚ್.ಡಿ.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಏಪ್ರಿಲ್, ೧೯೭೬

ಪ್ರಕಾಶಕರು :
**ಎಸ್. ಎಸ್. ಒಡೆಯರ,** ಎಂ.ಎ., ಎಲ್‌ಎಲ್.ಬಿ.
ಕುಲಸಚಿವರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ೩,೦೦೦ ಪ್ರತಿಗಳು
ಜೂನ್, ೧೯೬೮

ದ್ವಿತೀಯ ಮುದ್ರಣ : ೫,೦೦೦ ಪ್ರತಿಗಳು
ಎಪ್ರಿಲ್, ೧೯೭೬



**ಬೆಲೆ : ೨೫ ಪೈಸೆ**

ಮುದ್ರಕರು :
ಆಕಳವಾಡಿ ಮುದ್ರಣಾಲಯ,
ಮಂಗಳವಾರ ಪೇಟೆ, ಧಾರವಾಡ–೧

# ಮುನ್ನುಡಿ

( ಪ್ರಥಮ ಮುದ್ರಣ )

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋ-ಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗ-ವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜು ಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡ-ದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯ-ದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

## ಮುನ್ನುಡಿ

ಈ ಮಾಲೆಯಲ್ಲಿ ಈಗಾಗಲೇ ಎಪ್ಪತ್ತೂಮ್ರು ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಎರಡು ಮೂರು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನೂ ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೫–೪–೧೯೬೮

ಎ. ಎಸ್. ಅಡಕೆ
ಕುಲಪತಿ

# ಅರಿಕೆ

( ಪ್ರಥಮ ಮುದ್ರಣ )

ಎರಡೂವರೆ ವರ್ಷಗಳ ಹಿಂದೆ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಉಪನ್ಯಾಸ ಶಿಬಿರದ ಕಾರ್ಯಕ್ರಮದ ಅಂಗವಾಗಿ, ರಾಯಚೂರ ಜಿಲ್ಹೆಯ ಮಸ್ಕಿಗ್ರಾಮದಲ್ಲಿ 'ಪುರಾಣಕಥೆಗಳು' ಎಂಬ ವಿಷಯದ ಕುರಿತು ನಾನು ಮಾಡಿದ ಉಪನ್ಯಾಸವು ಈಗ ಪುಸ್ತಕರೂಪವಾಗಿ ಬರುತ್ತಿದೆ. ಉಪನ್ಯಾಸದಲ್ಲಿ ಕಥೆಗಳ ಪರಿಚಯಕ್ಕೆ ಹೆಚ್ಚು ಕಾಲ ಮೀಸಲಾಗಿದ್ದಿತು. ಇಲ್ಲಿ ಅನೇಕ ವಿದ್ವಾಂಸರ ಅಭಿಪ್ರಾಯಗಳೊಡನೆ ಕಥೆಗಳ ವಿವೇಚನೆ ವಿಶೇಷವಾಗಿ ಬಂದಿದೆ. ಆದರೆ ಉಪನ್ಯಾಸ ಹಾಗೂ ಲೇಖನಗಳ ಮೂಲ ರೂಪರೇಷೆ ಒಂದೇ ಆಗಿದೆ.

ಎಷ್ಟು ರೀತಿಗಳಿಂದ ವಿವೇಚನೆ ಮಾಡಿದರೂ ಅವುಗಳನ್ನೆಲ್ಲ ಮೀರಿ ಪುರಾಣಕಥೆ 'ಅತ್ಯತಿಷ್ಠದ್ದಶಾಂಗುಲಂ' ಎಂದು ತಾನೇ ತಾನಾಗಿ ನಿಲ್ಲುತ್ತದೆ. ದೇವಸೃಷ್ಟಿಯಂತೆ ಮಾನವನ ಈ ಸೃಷ್ಟಿಯು ರಹಸ್ಯಪೂರ್ಣವಾಗಿದೆ. ಆದರೆ ತಿಳಿಯಲು ಪ್ರಯತ್ನಿಸಿದರೆ ತಿಳಿದು ಬರುವ ಅರ್ಥದ ನವನೀತದ ಸ್ವಾರಸ್ಯವೇನು ಕಡಮೆಯದಲ್ಲ.

ಯೂಂಗರ ಮನೋವೈಜ್ಞಾನಿಕ ಗ್ರಂಥಗಳೆಲ್ಲವೂ ಈ ಅಭ್ಯಾಸದ ಕಾಲಕ್ಕೆ ದೊರೆಯದಿರುವುದು ಆ ವಿಷಯದಲ್ಲಿ ಸ್ವಲ್ಪ ಅರೆಕೊರೆಯನ್ನು ಕಾಣಿಸಿದೆ. ಅಲ್ಲದೇ ವಿರಾಡ್ರೂಪವಾದ ಈ

ವಿಷಯವು ಇಲ್ಲಿನ ಪುಟಗಳ ಪರಿಮಿತಿಯ ಕನ್ನಡಿಯಲ್ಲಿ ಕಾಣ-ಬೇಕಾದರೆ ಅದರ ಷಣ್ಮುಖದರ್ಶನವು ಸಮಗ್ರವಾಗಿ ಆಗುವುದು ಕಷ್ಟವಾಗಿದೆ. ಈ 'ಪುರಾಣ ಜಿಜ್ಞಾಸೆ'ಯು ಓದುಗರಲ್ಲಿ ಈ ವಿಷಯವನ್ನು ಇನ್ನಿಷ್ಟು ಅರಿಯಲು ಹೆಚ್ಚಿನ ಜಿಜ್ಞಾಸೆಯನ್ನು ಮೂಡಿಸಿದರೆ ಈ ಪುಸ್ತಿಕೆಯ ರಚನೆ ಸಾರ್ಥಕವಾಗುತ್ತದೆ.

'ಮೂಢನಂಬಿಕೆಗಳು', 'ಜಾನಪದ ಕಥೆಗಳು', 'ಪುರಾಣ ಕಥೆಗಳು' ಒಂದಕ್ಕೊಂದು ಹೊಂದಿಕೊಂಡ ವಿಷಯಗಳು. ಈ ಅಭ್ಯಾಸಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟ ವಿಶ್ವವಿದ್ಯಾಲಯದ ಪ್ರಕಟನಶಾಖೆಯವರಿಗೆ ಕೃತಜ್ಞತೆಗಳನ್ನು ಸಲ್ಲಿಸಿ ಈ ಗ್ರಂಥವೂ ಉಪನ್ಯಾಸಮಾಲೆಯಲ್ಲಿ ಜನಾದರಣೆಯನ್ನು ಪಡೆಯಲೆಂದು ಹಾರೈಸುತ್ತೇನೆ.

ಡಾ|| ಎ. ವ್ಹಿ. ಬಾಳಿಗಾ ಆರ್ಟ್ಸ್
ಮತ್ತು ಸಾಯನ್ಸ್ ಕಾಲೇಜು,
ಕುಮಟಾ.
ಎಲ್. ಆರ್. ಹೆಗಡೆ.
ತಾ|| ೧-೫-೧೯೬೮

# ಪರಿವಿಡಿ

# ಪೀಠಿಕೆ

'ಪುರಾಣ' ಶಬ್ದವು ಪ್ರಾಚೀನ ಕಾಲದಿಂದ ಬಂದು ಪರಂಪರೆಯಲ್ಲಿ ಪ್ರಚಾರದಲ್ಲಿದ್ದ ಕಥೆಗಳನ್ನು ಒಳಗೊಳ್ಳುತ್ತದೆ. ಗ್ರೀಕ ಭಾಷೆಯಲ್ಲಿ "mythos" ಅಂದರೆ ಹೇಳಿದ ಸಂಗತಿ, ಅಂದರೆ 'ಕಥೆ' ಎಂದು ಅರ್ಥವಿದೆ. ವಿಶ್ವಸೃಷ್ಟಿಯ ಅನೇಕ ನಿಗೂಢ ವಿಷಯಗಳನ್ನು ಕಥೆಗಳ ಮೂಲಕ ಪ್ರಾಚೀನ ಮಾನವನು ಹೇಳಲು ಯತ್ನಿಸಿದನು. Mystery, myth ಮುಂತಾದ ಶಬ್ದಗಳ ಮೂಲರೂಪದಲ್ಲಿ ರಹಸ್ಯಮಯ, ಗೂಢ ಎಂಬ ಅರ್ಥದ ಧ್ವನಿಯಿದೆಯೆಂದು ಅಡೊಲ್ಫ ಫೆರಿಯರ ಅವರು ಬರೆದಿದ್ದಾರೆ. ಸಂಸ್ಕೃತದ 'ಮುಸ್' ಈ ಕ್ರಿಯಾರೂಪದ ಅರ್ಥ 'ರಹಸ್ಯದಲ್ಲಿ ಕಾರ್ಯಮಾಡು' ಎಂಬುದಾಗಿದೆ.

ಪುರಾಣಗಳು ದೇವತೆಗಳು, ಭೂಮಿ, ಸೂರ್ಯ-ಚಂದ್ರ-ನಕ್ಷತ್ರಾದಿಗಳು, ಮನುಷ್ಯರು, ಪ್ರಾಣಿಗಳು, ಆಚರಣೆಯ ಪದ್ಧತಿಗಳು, ಸಾಮ್ರಾಜ್ಯಸ್ಥಾಪನೆ ಮುಂತಾದ ಎಲ್ಲ ತರದ ಸೃಷ್ಟಿಕಥೆಗಳನ್ನೊಳಗೊಂಡಿವೆ.

ಪುರಾಣ ಕಥೆಗಳಿಗೆ ಎರಡು ಮುಖ್ಯ ಉದ್ದೇಶಗಳಿವೆ. (ರಾಬರ್ಟ್ ಗ್ರೇವ್ಸ್) (೧) ಜಗತ್ತನ್ನು ಯಾರು ಸೃಷ್ಟಿಸಿದರು? ಅದು ಹೇಗೆ ನಾಶವಾಗುತ್ತದೆ? ಮೊಟ್ಟಮೊದಲಿನ ಮನುಷ್ಯರು ಯಾರು? ಸಾವಿನ ಅನಂತರ ಆತ್ಮಗಳು ಎಲ್ಲಿಗೆ ಹೋಗುತ್ತವೆ? ಮುಂತಾಗಿ ಚಿಕ್ಕಮಕ್ಕಳು ಕೇಳುವ ಅಡ್ಡಾತಿಡ್ಡ (awkward) ಪ್ರಶ್ನೆಗಳಿಗೆ ಉತ್ತರ ಕೊಡುವದು. (೨) ಆಚರಣೆಯಲ್ಲಿರುವ ಸಾಮಾಜಿಕ ಪದ್ಧತಿಗಳನ್ನು ಸಮರ್ಥಿಸುವುದೂ ಪರಂಪರೆಯಿಂದ ಬಂದ ವಿಧಿ ಹಾಗೂ ರೂಢಿಗಳ ಕಾರಣಗಳನ್ನು ಕಂಡು ಹಿಡಿಯುವುದೂ ಪುರಾಣಕಥೆಗಳ ಕಾರ್ಯವಾಗಿದೆ. ಅಥೆನ್ಸಿನ ಅರೆಚ್‌ಥೀಡ್ ಪಂಗಡದವರು ಸರ್ಪವನ್ನು ರಕ್ಷಾಬಂಧನದ ಚಿಹ್ನೆಯಾಗಿ ಬಳಸುತ್ತಿದ್ದರು. ಕಮ್ಮಾರ ದೇವತೆ(Smith God) ಹೆಫೆಸ್ಟುಸನ ಮಗನಾದ ಎರಿಚ್‌ಥೋನಿಯಸ್ ಎಂಬ ಸರ್ಪ-ಮಾನವನ ಸಂತತಿಯವರು ತಾವು ಎಂಬ ಪುರಾಣಕಥೆಯನ್ನು ಇದನ್ನು ವಿವರಿಸಲು ಅವರು ಪರಂಪರೆಯಿಂದ ಹೇಳುತ್ತ ಬಂದಿದ್ದರು.

# ೧. ಪುರಾಣ ಕಥೆಗಳ ಹಿನ್ನೆಲೆ

ಪ್ರಾಚೀನ ಮಾನವನಿಗೆ ನಿಸರ್ಗಶಕ್ತಿಗಳ ಕುರಿತಾಗಿ ಭಯ-ಭಕ್ತಿಗಳಿದ್ದವು. ಅವನ ಬಾಳಿಗೆ ಸುಖ-ದುಃಖಗಳನ್ನು ನೀಡುವ ಬಿರುಗಾಳಿ, ಕಡಲು, ನದಿ, ಜಲಪಾತ, ಸೂರ್ಯ-ಚಂದ್ರ ಇತ್ಯಾದಿಗಳ ಕುರಿತು ಅವನಿಗೆ ಅಚ್ಚರಿಯಾಗುತ್ತಿತ್ತು. ಅವುಗಳನ್ನು ತನ್ನ ಜೀವನದೊಡನೆ ಹೋಲಿಸಿಕೊಂಡು ಅರಿಯಲು ಹವಣಿಸುತ್ತಿದ್ದನು.

ಒಂದು ವಸ್ತುವಿನಿಂದ ಮತ್ತೊಂದು ವಸ್ತು ಉತ್ಪನ್ನ-ವಾಗುವುದನ್ನು ನೋಡಿ ಪ್ರಕೃತಿಯೆಲ್ಲವೂ ಯಾವುದೋ ಇತರ ಶಕ್ತಿಗಳಿಂದ ಉಗಮ ಹೊಂದಿದೆಯೆಂದು ಅವನು ಸ್ವಾಭಾವಿಕ-ವಾಗಿ ತಿಳಿಯುತ್ತಿದ್ದನು. ಪ್ರಾಣಿಗಳು ಚಲಿಸುತ್ತವೆ. ಅವು-ಗಳೊಳಗೆ ಬೇರೆ ಯಾವುದೋ ಪ್ರಾಣಿಯಿದ್ದು ಅದು ಅವುಗಳ ಚಲನೆಗೆ ಪ್ರೇರಕವಾಗಿದೆಯೆಂದು ಅವನ ತರ್ಕ. (ಈಗಲೂ ಅನೇಕ ಅನಾಗರಿಕ ಜನಾಂಗಗಳವರು ಹೀಗೆ ನಂಬಿದ್ದಾರೆ.) ನದಿಯು ರಭಸದಿಂದ ಹರಿಯುವುದನ್ನು ನೋಡಿದಾಗ ಯಾವುದೋ ಪ್ರಬಲವಾದ ಪ್ರಾಣಿಶಕ್ತಿ ಹರಿಯುತ್ತದೆಯೆಂದು ಅವರಿಗನಿಸುತ್ತಿತ್ತು. ಯುಗೋಸ್ಲಾವಿಯದ ಪುರಾಣದಲ್ಲಿ ಉರಿಯ ನಾಲಿಗೆಗಳನ್ನು ಸೂಸುವ ಅಗ್ನಿಯು ರೆಕ್ಕೆಗಳುಳ್ಳ ಬೆಂಕಿಹಾವು ಎಂದು ಕಲ್ಪಿಸಿದ್ದಾರೆ. ಹಾಗೆಯೇ ಹರಿಯುವ ನದಿಗಳು ಘಟಸರ್ಪ (Dragon) ಎಂಬ ಕಲ್ಪನೆ ಮೂಡಿದ್ದಿರ-ಬಹುದು.

ಪ್ರಾಣಿಗಳ ನೆರಳೂ, ಚಳಿದಿನಗಳ ಬೆಳಗಿನಲ್ಲಿ ಉಸಿರಿನ ಉಗಿಯು ಕಣ್ಣಿಗೆ ಕಾಣುವದೂ, ದೇಹದಲ್ಲಿದ್ದು ಕೆಲವು ವೇಳೆ ಪ್ರತ್ಯೇಕವಾಗಿ ಕಾಣುವ ಅದೃಶ್ಯ ಪ್ರಾಣಶಕ್ತಿಯ ತಿಳುವಳಿಕೆಗೆ ಕಾರಣವಾಗಿರಬೇಕು. ಸ್ವಪ್ನದ ಅನುಭವದಿಂದ ದೇಹದಿಂದ ಬೇರೆಯಾಗಿ ಹೋಗಿ ಅನುಭವ ಪಡೆಯುವ "ಮನ" (ಉಸಿರು, ಆತ್ಮ) ಶಕ್ತಿಯ ಕಲ್ಪನೆ ಬಲವಾಗಿ ಬೇರೂರಿದ್ದಿರಬೇಕು.

ಪ್ರಾಣಿಗಳಿಗೂ ಮನುಷ್ಯರಂತೆಯೇ ಸುಖ-ದುಃಖ, ರೋಷ, ಪ್ರತೀಕಾರ ಭಾವನೆಗಳಿರುವವು. ಸಮುದ್ರ, ಪರ್ವತ, ಮೋಡಗಳು, ಗುಡುಗು–ಸಿಡಿಲು ಮುಂತಾದವುಗಳಿಗೆ ಮಾನವಸಹಜ-ವಾದ ಭಾವನೆಗಳನ್ನು ಆರೋಪಿಸಲು ಸಹಾಯಕವಾಯಿತು. ತಿಳಿದುವರಿಂದ ತಿಳಿಯದುದನ್ನು ತಿಳಿಯಲೆಳಸಿದ ಪುರಾತನ ಮಾನವನು ಬಿರುಗಾಳಿಯ ಅಬ್ಬರವನ್ನೂ, ಸಮುದ್ರದ ಅಬ್ಬರದ ನಿರ್ಘೋಷವನ್ನೂ, ಸಿಡಿಲು-ಗುಡುಗುಗಳ ಕಡಕಡಾಟಗಳನ್ನೂ ಈ ಶಕ್ತಿಗಳ ಸಿಟ್ಟಿನ ರಭಸಗಳೆಂದು ತಿಳಿದಿದ್ದಿರಬೇಕು. ಅವನು 'ನಿಸರ್ಗದ ಭಾಷೆ'ಗಳನ್ನು ಅರ್ಥಮಾಡಿ-ಕೊಳ್ಳಲು ಚಿತ್ರಮಯವಾದ ಸಂಕೇತಗಳನ್ನು ಬಳಸಿದನು. ಲಿಪಿಯ ವಿಷಯದಲ್ಲಿ ಚಿತ್ರಲಿಪಿಯು ಹೇಗೆ ಪ್ರಾಚೀನವೋ ಹಾಗೆಯೇ ನಿಸರ್ಗದ ವಸ್ತು-ಕ್ರಿಯೆಗಳ ಸಂಕೇತಗಳಲ್ಲಿ ಚಿತ್ರಮಯ ಶಬ್ದರಚನೆಯು ತೀರ ಪ್ರಾಚೀನವಾದುದು. ಅದರಿಂದಲೇ ಪ್ರಾಚೀನ ಜನರ ಭಾಷೆಯು ಅನೇಕ ಕಾವ್ಯ ಸಂಕೇತಗಳಿಂದ ಕೂಡಿದೆ. ಇವನ್ನು ಪುರಾಣ ಕಾವ್ಯ (mytho-poeic) ಕಲ್ಪನೆಗಳೆಂದು ಕರೆಯುತ್ತಾರೆ. ಇವು ಪುರಾಣ ಕಥೆಗಳ ವಿಕಾಸಕ್ಕೆ ತಳಹದಿಯಾಗಿವೆ.

ನಿಸರ್ಗಶಕ್ತಿಗಳು ತನಗಿಂತಲೂ ಹೆಚ್ಚು ಶಕ್ತಿವಂತವಾಗಿದ್ದರೂ ಅವುಗಳಿಗೂ ಪರಿಮಿತಿಗಳೂ, ನಾಶವೂ ಇವೆಯೆಂದು ಪ್ರಾಚೀನ ಮಾನವನು ತಿಳಿದುಕೊಂಡನು. ತನಗನುಕೂಲವಾಗಿ ನಿಸರ್ಗವನ್ನು ನಿಯಂತ್ರಣದಲ್ಲಿ ತರಲು ಕ್ರಮಗಳನ್ನು ಯೋಜಿಸಹತ್ತಿದನು. ಅರಿತುಕೊಳ್ಳುವುದರ ಮೊದಲಿನ ಮೆಟ್ಟಿಲು ಅನುಕರಣ. ಸೃಷ್ಟಿಕ್ರಿಯೆಗಳ ಅನುಕರಣ ಮಾಡುವ ರೀತಿಗಳನ್ನು ಕಲ್ಪಿಸಿ, ಇದರಿಂದ ತಾನು ಈ ಶಕ್ತಿಗಳಿಗೆ ಸಂತೋಷವನ್ನುಂಟುಮಾಡಿ, ಅವು ತನಗನುಕೂಲವಾಗಿ ವರ್ತಿಸಲು ಇದರಿಂದ ಸಹಾಯವಾಗುವುದೆಂದು ತಿಳಿದು ಮಾಟದ ವಿಧಾನಗಳನ್ನು ಕಲ್ಪಿಸಿದನು. ದೊಡ್ಡವರು ನಕ್ಕುದನ್ನು ನೋಡಿ ಚಿಕ್ಕ ಶಿಶುಗಳು ನಗುವವು. ತಾವು ನಕ್ಕಿದ್ದರಿಂದ ದೊಡ್ಡವರಿಗೆ ಹೆಚ್ಚು ಸಂತಸವಾದುದನ್ನು ಕಂಡ ಶಿಶುಗಳು ಮತ್ತಿಷ್ಟು ಉಲ್ಲಾಸದಿಂದ ನಗುವವು. ಅದರಂತೆ ತಾನು ಮಾಡಿದ ಮಾಟದಿಂದ ನಿಸರ್ಗಶಕ್ತಿಗಳ ಮೇಲೆ ಪ್ರಭಾವವಾಗಿದೆಯೆಂದು ಪುರಾತನ ಮಾನವ ಕಲ್ಪಿಸಿದನು. ಈ ನಿಸರ್ಗಶಕ್ತಿಗಳ ಪ್ರತಿಕ್ರಿಯೆಯನ್ನು ತನಗನುಕೂಲವಾಗಿ ರೂಪಿಸಲು ಸೃಷ್ಟಿಕ್ರಮದ ವಿವಿಧ ವಿಧಿಕ್ರಮ (Rituals) ಗಳನ್ನು ಆಚರಣೆಯಲ್ಲಿ ತಂದನು.

ಸೂರ್ಯನು ಮೂಡಿ ಮೇಲೆ ಬಂದು ಆಮೇಲೆ ಮತ್ತೆ ಇಳಿದು ಮರೆಯಾಗಿ ಮರುದಿನ ಮತ್ತೆ ಬರುತ್ತಾನೆ. ಆದರೆ ಬಾರದಿದ್ದರೆ ?.... ಎಂಬ ಅಂಜಿಕೆ ಸೂರ್ಯನ ಪೂಜೆಯ ವಿಧಾನಕ್ಕೆ ಕಾರಣವಾಗುತ್ತದೆ. ಕಷ್ಟಮಯವಾದ ಚಳಿಗಾಲ

ಕಳೆದು ವಸಂತಕಾಲ ಬರಬೇಕೆಂಬ ಅಪೇಕ್ಷೆಯಿಂದ ಚಳಿಗಾಲ-ವನ್ನು ಕೊಂದು ವಸಂತವನ್ನು ತರುವ ಮಾಟವನ್ನು ಮಾಡು-ತ್ತಾನೆ. ಪ್ರಾಕ್ತನಮಾನವ- ವನಸ್ಪತಿಯ ಸಂಪದಭಿವೃದ್ಧಿಗಾಗಿ ಧಾನ್ಯದೇವತೆಯ ಪೂಜೆಮಾಡುವ ವಿಧಿಕ್ರಮಗಳನ್ನು ಆಚರಿಸು-ತ್ತಾನೆ.

ಇಜಿಪ್ತಿನ ಧಾನ್ಯದೇವತೆ ಒಸಿರಿಸ್. ನೈಲನದಿ ಇಜಿಪ್ತಿನ ಬೆಳೆಗಳ ಮುಖ್ಯ ಆಧಾರ. ಆದರಿಂದ ಒಸಿರಿಸ್ ನೈಲನದಿಯ ದೇವತೆಯೆಂದೂ ತಿಳಿಯುತ್ತಿದ್ದರು ಮಾಟದ ಶಕ್ತಿಯುಳ್ಳವನು ಪಂಗಡದ ಮುಖ್ಯಸ್ಥನಾಗಿ. ಮಾಟದ ಸಹಾಯದಿಂದ ಬೆಳೆಗಳು ಚೆನ್ನಾಗಿ ಫಲಕೊಡುವುದಕ್ಕೂ ಬೆಳೆಗಳ ಹಾಗೂ ಮನುಷ್ಯರ ರೋಗಗಳನ್ನು ವಾಸಿಮಾಡುವ-ದಕ್ಕೂ ಕಾರಣನಾಗುವನೆಂಬ ನಂಬಿಕೆಯಿಂದ ಅವನನ್ನು ರಾಜ-ನನ್ನಾಗಿ ಆರಿಸುತ್ತಿದ್ದರು. ಇಜಿಪ್ತಿನ ರಾಜರು ಒಸಿರಿಸ್‌ದೇವನ ಪ್ರತಿನಿಧಿಯೆಂದು ತಿಳಿಯುವದು ರೂಢವಾಯಿತು.

ವನಸ್ಪತಿಗಳಿಗೆ ಹುಟ್ಟು ಸಾವುಗಳಿವೆ. ಒಸಿರಿಸ್ ಅವುಗಳ ನಾಶವನ್ನು ಪ್ರತಿನಿಧಿಸಿದ ಮರಣದ ದೇವತೆಯೂ ಆಗಿದ್ದನು. ನಾಶವಾದ ವನಸ್ಪತಿಗಳು ಪುನಃ ಬೆಳೆಯುವಂತೆ, ಒಸಿರಿಸ್ ಮರಣಹೊಂದಿ ಪುನಃ ಜೀವ ಪಡೆಯುವ ಕುರಿತಾದ ಪುರಾಣಕಥೆಯಿದೆ. ಮಾಟಗಾರ ರಾಜನ ಮಾಟದ ಶಕ್ತಿಯು ಕಡಿಮೆಯಾಗಿದೆಯೆಂದು ಎಂಟು ವರ್ಷಗಳಿಗೊಮ್ಮೆ ಅವನನ್ನು ಕೊಂದು ಬೇರೆಯವನನ್ನು ರಾಜನನ್ನಾಗಿ ಮಾಡುವ ಪವಿತ್ರ ರಾಜನ ವಿಧಿಕ್ರಮಗಳು ಆಚರಣೆಯಲ್ಲಿದ್ದವು. ರಾಜನನ್ನು

ಕೊಂದು ಅವನ ಪತ್ನಿಯನ್ನು ಆವನ ಪ್ರತಿಸ್ಪರ್ಧಿಯು ಮದುವೆ ಯಾಗುವ ಅನೇಕ ಪುರಾಣಕಥೆಗಳಿವೆ.

ತಮ್ಮ ಶಕ್ತಿಯನ್ನು ಪುನಶ್ಚೇತನಗೊಳಿಸಿಕೊಳ್ಳಲು ದೇವತೆಗಳೇ ಆತ್ಮಬಲಿಯನ್ನು ಮಾಡಿಕೊಳ್ಳುವ ಒಂದು ಕಥೆ ಸ್ಕ್ಯಾಂಡಿನೇವಿಯದ ಪುರಾಣದಲ್ಲಿದೆ. ಟ್ಯೂಟನ್ (ನಾರ್ವೆ, ಸ್ವೀಡನ್, ಜರ್ಮನಿ ಇತ್ಯಾದಿ ಜನ) ಜನಾಂಗದ ಮುಖ್ಯದೇವತೆ ಓಡಿನ್ ಒಂದು ಹಳೆಯ ಕವಿತೆಯಲ್ಲಿ ಹೀಗೆ ಹೇಳುತ್ತಾನೆ: "ನನ್ನ ಭಲ್ಲೆಯಿಂದಲೇ ನಾನೇ ಗಾಯ ಮಾಡಿಕೊಂಡು ಓಡಿನ್‌ನಿಗೇ (ನನಗೇ) ನನ್ನ ರಕ್ತವನ್ನು ಅರ್ಪಿಸಿ ಗಾಳಿಯಿಂದ ಅಲುಗುವ ಮರದಮೇಲೆ ಜೋತಾಡುತ್ತೇನೆ. ಈ ಆತ್ಮಬಲಿಯ ಉದ್ದೇಶ ಪುನಶ್ಚೇತನ ಪಡೆಯುವುದು" ಇದು ಮಾಟದ ವಿಧಾನ (ನಮ್ಮ ದೇಶದ ದೇವತೆಗಳು ತಪಸ್ಸುಮಾಡಿ ತಮ್ಮ ಶಕ್ತಿಯನ್ನು ವೃದ್ಧಿ ಗೊಳಿಸಿಕೊಳ್ಳುತ್ತಾರೆ.) ಪ್ರಾಚೀನ ಮಾನವನು ದೇವತೆಗಳ ಅಥವಾ ಭೂತಗಳ ಶಕ್ತಿಹ್ರಾಸವಾಗಬಾರದೆಂದು ಅವುಗಳಿಗೆ ರಕ್ತಬಲಿಯನ್ನು ಸಮರ್ಪಿಸುತ್ತಾನೆ.

ಸೃಷ್ಟಿಕ್ರಮ ಆಕಾಶಲೋಕದಲ್ಲಿ ನಡೆದಂತೆಯೇ ಭೂಲೋಕ ದಲ್ಲಿಯೂ ನಡೆಯುತ್ತದೆಯೆಂದು ಪ್ರಾಚೀನ ಮಾನವನ ನಂಬಿಕೆ ದೇವತೆಗಳು ಸೃಷ್ಟಿಯನ್ನು ಮಾಡಿದಂತೆ ತಾನೂ ಸೃಷ್ಟಿಕ್ರಮದ ಮಾಟಮಾಡುತ್ತಾನೆ; ಚಿಕ್ಕಮಕ್ಕಳು ಸಮುದ್ರ-ತೀರದ ಮರಳಿನ ಮೇಲೆ ಕೋಟೆಯನ್ನು ಕಟ್ಟಿದಂತೆ ತಾನೂ ಸೃಷ್ಟಿಕರ್ತನಾಗುತ್ತಾನೆ. ದೇವರು ತನಗಿಂತ ದೊಡ್ಡವನು

ಆದರೂ ತಾನು ದೇವನಾಗಬಲ್ಲೆನೆಂಬ ತಿಳಿವಳಿಕೆಯನ್ನು ಹೊಂದುತ್ತಾನೆ. ದೇವತೆಗಳು ತನಗಿಂತಲೂ ಹೆಚ್ಚುಕಾಲ ಇರುತ್ತಾರೆ; ಮತ್ತು ಅಮರತ್ವವನ್ನು ಪಡೆದವರು. ಆದರೆ ಮುಳುಗುವ ಸೂರ್ಯ ಪುನಃ ಉದಯಹೊಂದಿದಂತೆ ತಾನೂ ಸಹ ಮೃತನಾದರೂ ಪುನರ್ಜನ್ಮ ಪಡೆಯಬಹುದು ಎಂದು ತಿಳಿಯುತ್ತಾನೆ. "ಮನುಷ್ಯರು ಮರ್ತ್ಯದೇವತೆಗಳು; ದೇವತೆಗಳು ಅಮರಮಾನವರು" ಇದು ಪುರಾಣ ಕಥೆಗಳ ವಿಷಯದಲ್ಲಿ ಬಹಳ ಮಹತ್ವದ ಮಾತಾಗಿದೆ.

ಶ್ರೇಷ್ಠವೀರರು ಅಥವಾ ಶ್ರೇಷ್ಠರಾಜರು ಮಡಿದಾಗ ಮಾಡುವ ಕೆಲವು ಸಂಸ್ಕಾರಗಳಿಂದ ಅವರೂ ದೇವಲೋಕಕ್ಕೆ ಸೇರಿ ದೇವರಾಗುವ ಅರ್ಹತೆಯನ್ನು ಪಡೆಯುವರೆಂದು ತಿಳಿಯುತ್ತಿದ್ದರು. ಸತ್ತ ವೀರರು ದೇವರೆಂದು ಪೂಜಿಸಲ್ಪಡಲಿಕ್ಕೆ ಅರ್ಹರಾಗುತ್ತಿದ್ದರು.

ದೇವತೆಗಳನ್ನು ಯೋಗ್ಯ ವಿಧಿ–ವಿಧಾನಗಳಿಂದ ತಮ್ಮ ಮೇಲೆ ಆವೇಶಮಾಡಿಕೊಳ್ಳುವ ಪೂಜಾರಿಗಳ ಕ್ರಮಗಳು ಜಗತ್ತಿನಾದ್ಯಂತ ರೂಢವಾಗಿವೆ. ಇಜಿಪ್ತಿನ ಪೂಜಾರಿಗಳ ಥೊತ್ ಎಂಬ ದೇವತೆಯು ಕಲ್ಪಿತ ಹಾವಭಾವಗಳನ್ನು ಸೃಷ್ಟಿಸಿದ ಆ ಥೊತ್‌ದೇವನಿಂದ ಅವರ ಶಬ್ದಶಕ್ತಿಯು ಬಂದಿತು ಎಂದು ತಿಳಿಯುವ ಪರಿಪಾಠವಿತ್ತು. ಅಂಥ ದೇವಾವೇಶ ಹೊಂದಿದ ಜನರು ಅನೇಕ ಪವಾಡಗಳನ್ನು ಮಾಡಬಹುದು ಎಂಬ ನಂಬಿಕೆ ಈಗಲೂ ಉಳಿದಿದೆ.

ರಾಜರು ತಾವು ದೇವತೆಗಳ ವಂಶದವರೆಂದು ಹೇಳಿಕೊಳ್ಳುತ್ತಿದ್ದರು. ಗ್ರೀಸಿನ ಅನೇಕ ರಾಜಮನೆತನಗಳವರು ತಾವು ಜ್ಯೂಸ್ ದೇವನ ಇಲ್ಲವೆ ಇತರ ದೇವತೆಗಳ ವಂಶದವರೆಂದು ಹೇಳಿಕೊಳ್ಳುವ ಅನೇಕ ಪುರಾಣಕಥೆಗಳಿವೆ.

## ೨. ಪುರಾಣ ಕಥೆಗಳ ಉಗಮ

ಪುರಾಣ ಕಥೆಗಳ ಉಗಮದ ರೀತಿಗಳನ್ನು ಕುರಿತು ಹಲವಾರು ಸಿದ್ಧಾಂತಗಳಿವೆ. ಅವುಗಳಲ್ಲಿ ಬಹಳ ಸಿದ್ಧಾಂತ-ಗಳಲ್ಲಿ ಹುರುಳುಂಟು. ಆದರೂ ಮಾಟದ ವಿಧಾನ ತೀರ ಪ್ರಾಚೀನ ಕ್ರಮವೆಂದು ಹೇಳಬೇಕಾಗುತ್ತದೆ. "ಮಾನವನು ತನ್ನ ಕೃತ್ಯಗಳ ತಾತ್ವಿಕತಳಹದಿಯೇನೆಂದು ವಿಚಾರಮಾಡುವ ಮೊದಲೇ ಕಾರ್ಯ ಮಾಡುತ್ತಾನೆ. ಮತ್ತು ಅವನ ಕಾರ್ಯ-ಗಳು ತನಗೆ ಕೆಲವು ಅನುಕೂಲಗಳನ್ನು ತರುವ ಉದ್ದೇಶ-ದಿಂದಲಾಗಲಿ, ತನಗೂ ತನ್ನ ಪಂಗಡಕ್ಕೂ ಒದಗುವ ಯಾವುದೇ ಗಂಡಾಂತರವನ್ನು ನಿವಾರಿಸುವ ಉದ್ದೇಶದಿಂದಾಗಲಿ ಇರುತ್ತವೆ" ಎಂದು ಲಾರ್ಡ ರಾಗ್ಲನ್ ಹೇಳುವುದರಲ್ಲಿ ತುಂಬ ಹುರುಳಿದೆ. ಪ್ರಾಚೀನ ಮಾನವನ ಮಾಟದ ವಿಧಾನಗಳಲ್ಲಿ ಪುರಾಣಕಥೆಗಳ ಉಗಮದ ಬೀಜಗಳನ್ನು ಕಾಣಬಹುದು.

ಪ್ರಾಗೈತಿಹಾಸಿಕ ಯುಗದ ಮೆಗ್ದಾಲೆನಿಯನ್ ಜನರಲ್ಲಿ ಪುರಾಣ ಕಥೆಗಳಿದ್ದುವೆಂದು ಊಹಿಸುವಂಥ ಚಿತ್ರಗಳು ದೊರ-ಕಿವೆ. ಒಬ್ಬ ಮನುಷ್ಯನಿಗೆ ಕುದುರೆಯ ಬಾಲ, ಕಾಡುಕೋಣನ

ತಲೆ, ಅದರದೇ ಕೊಳಚುಳ್ಳ ಮುಂಗಾಲುಗಳುಳ್ಳ ಚಿತ್ರವಿದೆ. ಇಲ್ಲಿ ಅವನು ಪ್ರಾಣಿಗಳನ್ನು ಆಕರ್ಷಿಸುವ ಮಾಟವನ್ನು ಮಾಡುವವನೆಂಬ ಊಹೆಯುಂಟು. ಯಾಕೆಂದರೆ ಒಂದು ಪ್ರಾಣಿ ಅವನ ಕಡೆಗೆ ತಲೆಯನ್ನು ತಿರುಗಿಸಿ ನಿಂತಿದೆ. ಅವನ ಒಂದಿರುವ ಎರಡು ಪ್ರಾಣಿಗಳೂ ಸ್ವಾಭಾವಿಕ ಪ್ರಾಣಿಗಳಲ್ಲ. ಒಂದು ಹೆಣ್ಣು ಪಶುವಿಗೆ ಮೊಲೆಗಳುಂಟು. ಅದರ ಹಿಂದಿನ ಎರಡು ಕಾಲುಗಳು ಚಿಗರೆಯವು. ಮುಂಭಾಗ ಕಾಡೆಮ್ಮೆಯನ್ನು ಹೋಲುತ್ತದೆ. ಮುಂಗಾಲುಗಳು ರೇನಡಿಯರ್‌ದ ಕಾಲುಗಳಂಥವು. ಇದು ಪುರಾಣಕಲ್ಪನೆಯಾಗಲಿ, ಯಾವುದೋ ಮಾಟಗಾರಿಕೆಯ ವಿಧಾನವಾಗಲಿ ಇರಬಹುದು. ಮನುಷ್ಯ ಹಾಗೂ ಪ್ರಾಣಿಗಳಲ್ಲಿನ ಅನ್ಯೋನ್ಯತೆಯನ್ನು ಇದು ತೋರಿಸುತ್ತದೆ. "ಮನುಷ್ಯರು ಪ್ರಾಣಿಗಳಾಗಿ ಪರಿವರ್ತನ ಹೊಂದಬಹುದು; ಪ್ರಾಣಿಗಳು ಮನುಷ್ಯರಾಗಬಹುದು ಎಂಬ ನಂಬಿಕೆಯಿದ್ದ ಪ್ರಾಚೀನ ಕಾಲವೊಂದಿತ್ತು. ಪ್ರಾಣಿಗಳು ಮನುಷ್ಯರಂತೆ ಮಾತನಾಡುವವೆಂಬ ಕಥೆಗಳಿಗೆ ಇದೇ ತಳಹದಿ." ಎಂದು ಜಿ ಎಚ್. ಲುಕ್ವೆಟ್ ಎಂಬವನು "ಪುರಾಣಜ್ಞಾನಕೋಶ" ಎಂಬ ಗ್ರಂಥದ "ಪ್ರಾಗೈತಿಹಾಸಿಕ ಪುರಾಣಜ್ಞಾನ" ಎಂಬ ಲೇಖನದಲ್ಲಿ ಅಭಿಪ್ರಾಯ ಪಟ್ಟಿದ್ದಾರೆ.

"ಪುರಾಣಕಥೆ ಯಾವುದೆಂದು ಕಟ್ಟುನಿಟ್ಟಾಗಿ ಹೇಳುವುದಾದರೆ, ಒಂದು ವಿಧಿಕ್ರಮದ ವರ್ಣನೆ: ಅದರ ಆಚರಣೆಗೆ ಸಂಬಂಧಿಸಿದ ಪುರಾಣಕಥೆಯ ನಿರೂಪಣೆ" ಎಂದು ಲುಯಿಸ್ ಸ್ಪೆನ್ಸರು ಹೇಳಿದ್ದಾರೆ.

ಸರ್ ಜೇಮ್ಸ್ ಫ್ರೇಸರರು 'ಅನೇಕ ಮಾಟಗಳನ್ನು ಚಿತ್ರಕ ಶೈಲಿಯಲ್ಲಿ ವರ್ಣಿಸಿ, ಅವನ್ನು -ನಟನೆಮಾಡಿ ತೋರಿಸುವ ಕ್ರಮಗಳಿದ್ದವು. ಅನೇಕ ವಿಧಿಕ್ರಮಗಳು ಅಳಿದು ಅವುಗಳ ಪುರಾಣಕಥೆಗಳಷ್ಟೇ ಉಳಿದಿವೆ' ಯೆಂದು ಹೇಳಿದ್ದುಂಟು.

ವೇದಗಳ ಯಜ್ಞಗಳಲ್ಲಿ ಯಜ್ಞಮಂತ್ರಗಳ ಸಂಭಾಷಣೆಯ ಭಾಗಗಳನ್ನು ಋತ್ವಿಜರು ಆಯಾ ಪಾತ್ರಗಳಂತೆ ಅಭಿನಯಿಸುತ್ತಿದ್ದರು. ವಸಿಷ್ಠ ವಿಶ್ವಾಮಿತ್ರ, ಊರ್ವಶೀ–ಪುರೂರವರ ಸಂಭಾಷಣೆಗಳನ್ನು ಹೀಗೆಯೇ ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು.

ಹೊಸವರ್ಷದ ಹಬ್ಬವನ್ನು ಆಚರಿಸುವುದು ಜಗತ್-ಸೃಷ್ಟಿಯ ಸಾಂಕೇತಿಕ ಪುನರಾವೃತ್ತಿಯಾಗಿದೆ. ಪರ್ಶಿಯಾದ ಹೊಸ ವರ್ಷವಾದ "ನವರೋಜ್" ಅಹುರಮಜ್ದ ಎಂಬ ಪ್ರಾಚೀನ ಪರ್ಶಿಯಾದ ದೇವತೆಯ ಹಬ್ಬವಾಗಿದೆ. ಜಗತ್ತಿನ ಹಾಗೂ ಮನುಷ್ಯರ ಸೃಷ್ಟಿಯನ್ನು ಮಾಡಿದ ದಿನದ ಆಚರಣೆ ಅದು.

ಬಾಬಿಲೋನಿಯಾದ ಹೊಸವರ್ಷದ ಉತ್ಸವ 'ಆಕೀತು' ಎಂಬ ಹಬ್ಬ. ಅದನ್ನು ಮಕರ ಸಂಕ್ರಮಣ ಮತ್ತು ಕರ್ಕ ಸಂಕ್ರಮಣ ಎರಡೂ ಸಮಯಗಳಲ್ಲಿ ಆಚರಿಸಬಹುದಾಗಿತ್ತು. ಇದರಲ್ಲಿ ರಾಜನು ಮಹತ್ವದ ಪಾತ್ರವಹಿಸುತ್ತಿದ್ದನು. ಆಗ ಸೃಷ್ಟಿಕ್ರಮದ ಕಾವ್ಯವಾದ 'ಎನೂಮಾ ಎಲಿಶ್' ಎಂಬುದನ್ನು ಸೃಷ್ಟಿಕರ್ತನಾದ ಮರ್ದುಕ್‌ದೇವನ ದೇವಾಲಯದಲ್ಲಿ ಹಾಡು

ತ್ತಿದ್ದರು. ಇದರಲ್ಲಿ ಟಿಯಾಮತ್ (ಸಮುದ್ರ) ದೈತ್ಯಳಿಗೂ ಮರ್ದುಕ್ ದೇವನಿಗೂ ಕಾಳಗವಾಗಿ ಮರ್ದುಕ್ ಅವಳನ್ನು ಕೊಲ್ಲುತ್ತಾನೆ. ಆಗಿನ ಅಸ್ತವ್ಯಸ್ತವನ್ನು (Chaos) ಕೊನೆಗೊಳಿಸಿ ಅವನು ವಿಶ್ವನಿರ್ಮಾಣಮಾಡಿದ ಘಟನೆಯನ್ನು ಅದರಲ್ಲಿ ನಿರೂಪಿಸಿದೆ. ಮರ್ದುಕ್ ಅವಳ ಸೀಳಿದ ದೇಹದ ಭಾಗಗಳಿಂದ ವಿಶ್ವವನ್ನು ಸೃಜಿಸುತ್ತಾನೆ. ಕಿಂಗು ಎಂಬ ಅವಳ ಪಕ್ಷದ ದೈತ್ಯನ ರಕ್ತದಿಂದ ಮಾನವನನ್ನು ನಿರ್ಮಿಸುತ್ತಾನೆ. ಈ ವಿಧಿಕ್ರಮ ಸೃಷ್ಟಿ (Creation Ritual) ಮೂಕಾಭಿನಯ ಮಾಡುವ ಎರಡು ಗುಂಪುಗಳಾಗಿ ನಿಂತ ನಟರಿಂದ ಅಭಿನೀತವಾಗುತ್ತಿತ್ತು. ಈ ಅಭಿನಯವು ನವೀನಕಾಲ-ಪುರಾಣಕಾಲಗಳಲ್ಲಿ ಸಮನ್ವಯವನ್ನು ಸಾಧಿಸುವಂಥ ಕ್ರಮವಾಗಿತ್ತು. "ಮರ್ದುಕನು ಟಿಯಾಮತ್ತಳನ್ನು ಗೆಲ್ಲುವುದೂ, ಅವಳ ಜೀವಿತವು ಮೊಟಕಾಗುವುದೂ ಮುಂದುವರಿಯಲಿ" ಎಂದು ಅಲ್ಲಿನ ಮುಖ್ಯ ಪಾತ್ರಧಾರಿಯು ಘೋಷಿಸುತ್ತಿದ್ದನು.

ಹಲ್ಲುನೋವನ್ನು ಗುಣಮಾಡುವ ಅಸೀರಿಯದ ಒಂದು ಮಾಟದ ಮಂತ್ರದಲ್ಲಿ ಹೀಗಿದೆ: "ಸೃಷ್ಟಿಕರ್ತನಾದ ಅನು ದೇವನು ಸ್ವರ್ಗಗಳನ್ನು ಮಾಡಿದಮೇಲೆ, ಸ್ವರ್ಗಗಳು ಭೂಮಿಯನ್ನೂ, ಭೂಮಿ ನದಿಗಳನ್ನೂ, ನದಿಗಳು ಕಾಲುವೆಗಳನ್ನೂ, ಕಾಲುವೆಗಳು ಸರೋವರಗಳನ್ನೂ, ಸರೋವರಗಳು ಹುಳವನ್ನೂ ನಿರ್ಮಿಸಿದವು. ಹುಳವು ಅಳುತ್ತ ಶಮಾಶ್ ಮತ್ತು ಈಯಾ ದೇವತೆಗಳ ಹತ್ತಿರ ಹೋಗಿ ಕೇಳಿತು: 'ನನಗೆ ತಿನ್ನಲಿಕ್ಕೂ ಹಾಳುಮಾಡಲಿಕ್ಕೂ ಏನನ್ನು ಕೊಡುತ್ತೀರಿ ?' ದೇವತೆಗಳು

ಹಣ್ಣುಗಳನ್ನು ನೀಡಿದರು. ಆದರೆ ಅದು ಮನುಷ್ಯರ ಹಲ್ಲು-ಗಳನ್ನೇ ಕೇಳಿತು. 'ನೀನು ಹೀಗೆ ಕೇಳಿದ್ದರಿಂದ ದೇವನು ತನ್ನ ಬಲಿಷ್ಠವಾದ ಕೈಯಿಂದ ನಿನ್ನನ್ನು ಭಗ್ನಮಾಡಲಿ.' ಇದು ದೇವತೆಗಳ ಶಾಪ." ಈ ಮಂತ್ರವು ಹಲ್ಲುನೋವಿನ ಹುಳವನ್ನು ದೇವರು ಮೊದಲಿಗೆ ನಾಶಮಾಡಿದ ಸಂದರ್ಭವನ್ನು ಹೇಳುವ ಮಾಟದಿಂದ ಹಲ್ಲುನೋವು ಗುಣವಾಗುವದೆಂದು ನಂಬುತ್ತಿದ್ದರು.

ಋಗ್ವೇದದ ಯಜ್ಞವೇದಿಕೆಯ ರಚನೆಯು ಜಗತ್ತಿನ ಸೃಷ್ಟಿಕ್ರಮದ ಅನುಕರಣೆಯ ಉದಾಹರಣೆಯಾಗಿದೆ. 'ದೇವತೆಗಳು ಹೀಗೆ ಮಾಡಿದರು; ಮನುಷ್ಯರು ಹೀಗೆ ಮಾಡುತ್ತಾರೆ.' ಎಂದು ತೈತ್ತಿರೀಯ ಬ್ರಾಹ್ಮಣ (1: –5, 7: –4) ದಲ್ಲಿದೆ. ಪ್ರತಿಯೊಂದು ವಿಧಿಕ್ರಮವೂ ದೇವತೆಗಳ ಹಳೆಯ ಮಾದರಿ (Arche type)ಯ ಅನುಕರಣವಾಗಿದೆ.

ಮದುವೆಯ ವಿಧಿಗಳಿಗೂ ದೇವರ ಮಾದರಿಯ ಉದಾ-ಹರಣೆಯಿದೆ. ಮನುಷ್ಯರ ಮದುವೆಯು ಆಕಾಶ(ದ್ಯೌ) ಮತ್ತು ಪೃಥ್ವಿಗಳ ಮದುವೆಯಾಗಿದ್ದು ಜಗತ್ತಿನ ಸೃಷ್ಟಿಕ್ರಮದ ನೆನಪನ್ನು ತರುವುದೆಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿದೆ. ಮದುವೆಗಳಲ್ಲಿ ಕೃಷ್ಣ-ರುಕ್ಮಿಣಿ, ರಾಮ ಸೀತೆ, ಶಿವ-ಪಾರ್ವತಿ ಮುಂತಾದ ದೇವತೆಗಳ ಮದುವೆಗಳ ಕಥೆಗಳನ್ನು ಹಾಡುಗಳಲ್ಲಿ ಹೇಳುತ್ತಾರೆ.

ಮಳೆ ಬೆಳೆಗಳು ಸರಿಯಾಗಿ ಆಗಬೇಕೆಂದು ಪ್ರಾಚೀನ ಮಾನವರು ಮಾಟದ ವಿಧಿಕ್ರಮಗಳನ್ನು ಮಾಡುತ್ತಿದ್ದರು. ವೇದದಲ್ಲಿ ಇಂಥ ಅನೇಕ ವಿಧಿಗಳ ವರ್ಣನೆಯೂ ಅವುಗಳ ಮಂತ್ರಗಳ ವರ್ಣನೆಯೂ ಉಂಟು. ವಿಧಿಕ್ರಮಗಳ ಇತಿಹಾಸದ ದೃಷ್ಟಿಯಿಂದಲೂ, ಸಾಮಾಜಿಕ ಚರಿತ್ರೆಯ ದೃಷ್ಟಿಯಿಂದಲೂ ಇವು ಮಹತ್ವದವಾಗಿವೆ. ಇವುಗಳಲ್ಲಿ ರೇತಸ್ಸಿಂಚನ ವಿಧಿಯ ಸೂಕ್ತವು ವಿಶೇಷ ಮಹತ್ವದ್ದಾಗಿದೆ. ಅದು ನಾಭಾನೇದಿಷ್ಟ ಎಂಬ ದ್ರಷ್ಟಾರನು ಹೇಳಿದ್ದೆಂದು ನಂಬಿಕೆಯಿದೆ. ಆ ಸೂಕ್ತವು ಕನ್ಯೆಯೊಡನೆ ಸಂಯೋಗಮಾಡಿದ ಅನೇಕ ಕಾಮಪ್ರತೀಕ-ಗಳಿಂದ ಕೂಡಿದೆ. ಪ್ರಜಾಪತಿಯು ತನ್ನ ಮಗಳಾದ ಸರಸ್ವತಿಯನ್ನು ಮದುವೆಯಾದ ಅದ್ಭುತ ಪುರಾಣಕಥೆಯ ಮೂಲವಿಲ್ಲಿದೆ.

ಬಂಜೆಯಾದ ಆಕಳು ಹಾಲುಕರೆಯುವಂತೆ ಮಾಡಿದ ಉದ್ದೇಶವಿಲ್ಲಿ ಕಾಣುತ್ತದೆ. ಶಬರದುಘಾ (ಹಾಲನ್ನು ಕರೆ-ಯುವ) ಆಕಳು ಬೇಕಾದ ಫಲವನ್ನು ನೀಡುತ್ತದೆ. ಇಲ್ಲಿ ಆಕಳು ಎಂದರೆ ಆಕಾಶದ ಮೋಡವೆಂಬ ಋಗ್ವೇದದ ಪ್ರಸಿದ್ಧ ಅರ್ಥವಿದೆ. (ಟ್ಯೂಟನ್ನರ ಪುರಾಣದ ಸೃಷ್ಟಿಕಥೆಯಲ್ಲಿ ಜಾಘುಮ್ಲಾ ಎಂಬ ಆಕಳು ಕತ್ತಲೆಯ ಆಕಾಶದ ಸಂಕೇತ. ಆ ಆಕಳಿನ ನಾಲ್ಕೂ ಮೊಲೆಗಳಿಂದ ಅರ್ಥಾತ್ ನಾಲ್ಕೂ ದಿಕ್ಕುಗಳಿಂದ ಸುರಿಯುವ ಹಾಲು ಮಳೆಯೇ ಆಗಿದ್ದಿರಬೇಕು. ಇಜಿಪ್ತದ ಪುರಾಣದ ಹಾಥೋರ್ ಎಂಬ ಆಕಾಶದೇವತೆಯೂ ಆಕಳೇ.) ಕೃಷಿಕನ ಇಚ್ಛೆಯೆಂದರೆ ಮಳೆ. ಆ ಮಳೆ ಬರುವಂತೆ

ಮಾಟಮಾಡುವ ವಿಧಾನವಿಲ್ಲಿದೆ. ಆದರಿಂದ ಮುಂದಿನ ಕಾಮಧೇನು, ಚ್ಯವನ-ಸುಕನ್ಯಾ ಮುಂತಾದ ಪುರಾಣವಿಷಯ ಗಳಿಗೆ ಇಲ್ಲಿ ಆಸ್ಪದವಿದೆ.

ಈ ಸೂಕ್ತದಲ್ಲಿ ಮುಖ್ಯವಾಗಿ ಈ ಕೆಳಗಿನ ಅಂಶಗಳಿವೆ-ಯೆಂದು ಡಾ॥ ಎಸ್. ಎ. ಡಾಂಗೆಯವರು ಬರೆದಿದ್ದಾರೆ!

(೧) ಕನ್ಯೆಯೊಡನೆ ಸಂಯೋಗ (೨) ಬಂಜೆ ಆಕಳುಗಳ ಗರ್ಭಧರಿಸಿ ಶಬರದುಘಾ ಆದುದು. ಆದರ ಪರಿಣಾಮ ಆಕಳು ಗಳ ಸಂತಾನಾಭಿವೃದ್ಧಿ. (ಇಲ್ಲಿ ಪ್ರಜಾಪತಿಯ ಉಲ್ಲೇಖವಿಲ್ಲದಿದ್ದರೂ ಬೇರೆ ಸೂಕ್ತಗಳಲ್ಲಿದೆ.)

"ಯಜ್ಞಮಾಡಿದಾಗ ಸ್ವರ್ಗದ ದೇವರಿಗೆ ಋತ್ವಿಜನು ತರ್ಪಣವನ್ನು ಕೊಟ್ಟಾಗ ಅವನು ಹೆಣ್ಣುಗಳಿದ್ದಲ್ಲಿ ಓಡಿದನು. ದೇವನು ತನ್ನ ಮಗಳಲ್ಲಿಯೇ ಬೀಜಬಿತ್ತಿದನು.'' ಈ ಮಾತಿನಲ್ಲಿ ಆಕಾಶದ ದೇವರು ಮಳೆ ಸುರಿಸುವ ಸಂಕೇತವಿದೆ. ಎತ್ತು ಆಕಳಿನಲ್ಲಿ ಪ್ರಜೋತ್ಪತ್ತಿ ಮಾಡುವ ಸಾಂಕೇತಿಕ ವರ್ಣನೆಯು ಮಳೆ ಸುರಿಸುವುದನ್ನೇ ಸೂಚಿಸುತ್ತದೆ. ರೇತಸ್ಸನ್ನು (ಇಲ್ಲಿ ಸೋಮರಸ ಇಲ್ಲವೆ ತುಪ್ಪವನ್ನು ಅಗ್ನಿಯಲ್ಲಿ ಹಾಯ್ದು ಮಳೆ ಗಾಗಿ ಮಾಟ ಮಾಡುವ ವಿಧಿಯು ವೇದಕಾಲದಲ್ಲಿ ಬಹಳ ನಿಶ್ಚಿತ ಸ್ವರೂಪ ಪಡೆದ ಸಂಸ್ಕಾರವಾಗಿತ್ತು.

ಚ್ಯವನ ಅಂದರೆ ರೇತಸ್ಸನ್ನು ಸುರಿಸುವವನು. ವೃದ್ಧ-ನಾಗಿದ್ದ ಅವನು ಪುನಃ ಯೌವನವಂತನಾಗುವುದಕ್ಕೂ ಮಾಟದ ವಿಧಿಯಿದೆ. ಫಲವನ್ನು ತರುವ ಸೂರ್ಯಪಿತೃವಿನ ಪಾತ್ರವನ್ನು

ಯಜ್ಞಕಾಲದಲ್ಲಿ ಒಬ್ಬನು ವಹಿಸುವುದರ ಸ್ಪಷ್ಟ 'ಅಮೀಮೀತ ವೇದಿಂ' ಎಂಬ ಮಾತಿನಲ್ಲಿದೆಯೆಂದೂ (ಈ ಕಥೆಯು) ಚ್ಯವನನು ಐತಿಹಾಸಿಕ ವ್ಯಕ್ತಿಯಲ್ಲವೆಂದೂ ಸ್ಪಷ್ಟವಿದೆಯೆಂದೂ ಡಾ॥ ಡಾಂಗೆ ಬರೆದಿದ್ದಾರೆ.

ವೇದಸೂಕ್ತದಲ್ಲಿಯು ಕನಾ (ಕನ್ಯೆ) ಮಳೆತರುವ ಮೋಡವೆಂದೇ ಸಾಯಣರು ಬರೆದಿದ್ದಾರೆ. ಮಳೆ ತರಿಸುವ ಸಲುವಾಗಿ ಕಾಮಕ್ರಿಯೆಗಳನ್ನಾಚರಿಸುವುದು ವೇದಕಾಲದ ಪರಂಪರೆಗೆ ಗೊತ್ತಿದೆ. (ಹೊಲಗಳಲ್ಲಿ ಮೈಥುನವನ್ನಾಚರಿಸುವುದು ಬೆಳೆಯು ಸಮೃದ್ಧವಾಗುವಂತೆ ಮಾಡುವ ಮಾಟವೆಂದು ಬಹಳ ದೇಶಗಳಲ್ಲಿ ಪ್ರಚಲಿತವಿತ್ತು.)

## ೩. ನಿಸರ್ಗಪುರಾಣಗಳು

ಧಾರ್ಮಿಕ ವಿಧಿಕ್ರಮಗಳ ಜತೆಯಲ್ಲಿಯೇ ಪುರಾಣ ಕಥೆಗಳ ವಿಕಾಸವಾಗಿದ್ದರೂ ನಿಸರ್ಗದ ಶಕ್ತಿಗಳನ್ನು ದೇವತೆಗಳ ಸ್ವರೂಪದಲ್ಲಿ ಚಿತ್ರಿಸಿದ ಪುರಾಣಕಥೆಗಳು ಅವುಗಳಲ್ಲಿಯೂ ಸೇರಿರುತ್ತವೆ.

ಸಂಸ್ಕೃತದಲ್ಲಿ 'ದೇವ' ಅಂದರೆ ಹೊಳೆಯುವವ ಎಂಬರ್ಥ ವಿದೆ. ಸೂರ್ಯ. ಚಂದ್ರ. ನಕ್ಷತ್ರ. ಗ್ರಹಗಳು ಹೊಳೆಯುತ್ತವೆ ಅದರಿಂದ ಅವು ದೇವತೆಗಳು. ಹೊಳೆಯುವ ಆಕಾಶ

ದ್ಯೌ. ಗ್ರೀಸಿನ ಶ್ರೇಷ್ಠದೇವ ಜ್ಯೂಸ್ (Zeaus). ಯಹೂದಿಗಳ ದೇವರು ಯಹೋವ. ಆಕಾಶವು ಭೂಮಿಯ ಮೇಲೆ ಆವರಣದ ಹಾಗೆ ಇದ್ದು ಅದನ್ನು ರಕ್ಷಿಸುತ್ತದೆಯೆಂಬ ಕಲ್ಪನೆ ಸ್ವಾಭಾವಿಕವಾಗಿದೆ ತಂದೆ ರಕ್ಷಕ, ತಾಯಿ ಹೊತ್ತು, ಹೆತ್ತು ಪೋಷಿಸುವವಳು. ಭೂಮಿ-ತಾಯಿ, ಆಕಾಶ-ತಂದೆ ಎಂಬ ಪುರಾಣದ ಕಲ್ಪನೆ ಇದರಿಂದ ಮೂಡಿತು.

'ಗ್ರೀಸಿನ ಯುರೇನಸ್ ದೇವತೆಗೂ ಸಂಸ್ಕೃತದ ವರುಣ ಶಬ್ದಕ್ಕೂ ಸಾಮ್ಯವಿದೆ. 'ವರುಣ' ಆಮೇಲೆ ಸಮುದ್ರದ ದೇವತೆಯಾದರೂ ಆಕಾಶ ಎಂಬರ್ಥವನ್ನೇ ಕೊಡುತ್ತದೆ. 'ವರ್' ಎಂದರೆ ಆವರಿಸು; ಭೂಮಿಯನ್ನು ಆವರಿಸುವವನೆಂಬ ಚಿತ್ರಮಯವಾದ ಹೆಸರು ಆಕಾಶಕ್ಕೆ ಇದೆ'ಯೆಂದು ಮೆಕ್ಸ್ ಮುಲರರು ಬರೆಯುತ್ತಾರೆ.

ಯುಗೊಸ್ಲಾವಿಯಾದಲ್ಲಿ ಆಕಾಶವನ್ನು ಸ್ವರೊಗ್ (ಸ್ವರ್ಗ) ಎಂದು ಕರೆದು ಆ ದೇವತೆಯನ್ನು ಪೂಜಿಸುತ್ತಿದ್ದರು. 'ಸ್ವರ್' ಎಂಬ ಕ್ರಿಯಾರೂಪ 'ಹೊಳೆ' ಎಂಬ ಅರ್ಥವನ್ನು (ಸಂಸ್ಕೃತದಲ್ಲಿ) ಹೊಂದಿದೆ.

ಆಕಾಶದೇವತೆಯಾದ ಇಂದ್ರನ ಮಹತ್ವ ವೇದದಲ್ಲಿ ಬಹಳ. ಇಂದ್ರನು ಮಾಡಿದ ಸಾಹಸಗಳಲ್ಲಿ ವೃತ್ರಾಸುರ ಸಂಹಾರ ಮುಖ್ಯವಾದುದು. ಅವನು ನಿದ್ರಿಸಿದ ವೃತ್ರನ ಮೇಲೆ ಹಲ್ಲೆ ಮಾಡಿದನು; ಸರ್ಪವನ್ನು ಗುಹೆಯಲ್ಲಿ ಛೇದಿಸಿ-

ದನು ಮುಂತಾದ ವರ್ಣನೆಗಳಿವೆ. ವೃತ್ರನೆಂದರೆ ಸರ್ಪ: ಜಗತ್ತಿನ ರಚನೆಯಾಗುವ ಮೊದಲಿನ ಅಸ್ತವ್ಯಸ್ತ ಪರಿಸ್ಥಿತಿ (Chaos) ಎಂದು ಮಾರ್ಸಿಯಾ ಎಲಿಸೇದ್ ಎಂಬ ವಿದ್ವಾಂಸರು ಅರ್ಥಮಾಡಿ ಇಂದ್ರನು ತನ್ನ ವಜ್ರಾಯುಧವನ್ನು ಹೊಡೆದು ಅವನನ್ನು ನಾಶಮಾಡಿ ಸೃಷ್ಟಿಮಾಡಿದನೆಂದು ಬರೆದಿದ್ದಾರೆ. ಬಾಬಿಲೋನಿಯ ಪುರಾಣದ ಟಿಯಾಮತ್ (ಸರ್ಪರೂಪದಲ್ಲಿ) ಜಗತ್ತಿನ ಸೃಷ್ಟಿಯ ಮೊದಲು ವಿಜೃಂಭಿಸಿದಂತೆ ವೃತ್ರನು ಜಗತ್ತನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದನು. ಆ ಮಹಾಸರ್ಪ ನೀರನ್ನು ಹಿಡಿದುಕೊಂಡು ಜಗತ್ತಿಗೆ ನೀರಿನ ಕೊರತೆಯುಂಟಾಗುವಂತೆ ಮಾಡಿದ ಕಲ್ಪನೆಯೂ ವೇದಗಳಲ್ಲಿದೆ. ಮಳೆ ಬೀಳದಿದ್ದರೆ ಪ್ರಾಚೀನ ಆರ್ಯರು ರಾಕ್ಷಸರು ಮಳೆಯ ಮೋಡಗಳನ್ನು (ಆಕಳುಗಳನ್ನು) ಕದ್ದುಕೊಂಡು ಗುಹೆಗಳಲ್ಲಿ ಅಡಗಿಕೊಳ್ಳುತ್ತಿದ್ದರೆಂದು ತಿಳಿದು ಅವರನ್ನು ಕೊಲ್ಲಲು ಇಂದ್ರನಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ವೃತ್ರನನ್ನು ಕೊಂದು ಗೋವುಗಳನ್ನು ಗೆದ್ದ ಇಂದ್ರನು ಗೋವಿಂದನಾದನು. ಕತ್ತಲೆಯ ಪ್ರತೀಕಗಳಾದ ರಾಕ್ಷಸರನ್ನು ನಾಶಮಾಡಿ ಬೆಳಕನ್ನು ತಂದು 'ಹರಿ'(ನಾಶ ಮಾಡುವವನು) ಎಂಬ ಹೆಸರನ್ನು ಅವನು ಪಡೆದನು. ರಾಕ್ಷಸರ ಪಟ್ಟಣಗಳನ್ನು ನಾಶಮಾಡಿ 'ಪುರಂದರ' ನಾದನು. ಮಳೆಯನ್ನು ಸುರಿಸುವ ಮೂಲಕ 'ವೃಷಣ'ನಾದನು. ಮುಂದೆ ವಿಷ್ಣುವಿನ ಹೆಸರಿನಲ್ಲಿ ಬೆಳೆದ ಅನೇಕ ಪುರಾಣಕಥೆಗಳಿಗೆ ವೇದದ ಇಂದ್ರನ ವರ್ಣನೆ ತಳಹದಿಯಾಗಿದೆಯೆಂದು ಡಾ॥ ಭಗಬತ್ ಕುಮಾರ ಗೋಸ್ವಾಮಿಯವರು ಬರೆದುದು ಹೃದಯಂಗಮ

ವಾಗಿದೆ. ಮಳೆಯನ್ನು ತರಿಸುವ ದೇವನಾದ ಇಂದ್ರನು ಶ್ರೀ (ಲಕ್ಷ್ಮೀ) ಪತಿ. 'ರಾಧಸ್' ಶ್ರೀಯ ಮತ್ತೊಂದು ರೂಪ. 'ಸತ್ಯರಾಧಸ್' ಎಂಬುದು ಇಂದ್ರನ ಹೆಸರುಗಳಲ್ಲೊಂದು ಎಂದು ಋಗ್ವೇದದ ಆಧಾರದಿಂದ ಡಾ॥ ಗೋಸ್ವಾಮಿಯವರು ತಿಳಿಸಿ ಕೃಷ್ಣ–ರಾಧೆಯರ ಪ್ರಣಯದ ಕಥೆಗೂ ವೇದದ ಮೂಲ-ವಿದೆಯೆಂದು ಹೇಳಿದ್ದಾರೆ. ಇಂದ್ರನ ಸ್ಥಾನವನ್ನು ಮುಂದೆ ವಿಷ್ಣು ಆಕ್ರಮಿಸಿದನು. ಪುರಾಣಗಳ ಅನೇಕ ಕಥೆಗಳು ಇಂದ್ರ ಮತ್ತು ವಿಷ್ಣು ಇವರ ಪ್ರತಿಸ್ಪರ್ಧೆಯ ಸೂಚನೆ ಕೊಡುತ್ತವೆ. ( ಇಂದ್ರನೊಡನೆ ಯುದ್ಧಮಾಡಿ ಕೃಷ್ಣನು ಪಾರಿಜಾತವೃಕ್ಷವನ್ನು ಸ್ವರ್ಗದಿಂದ ತಂದ ಕಥೆಯಿದೆ. )

ಆರ್ಯರ ಇಂದ್ರ ಹಾಗೂ ಗ್ರೀಕರ ಜ್ಯೂಸ್ ದೇವರ ಅನೈತಿಕ ಪ್ರಣಯದ ಕಥೆಗಳು ಅನೇಕವಿವೆ. ಇಂದ್ರನು ಗೌತಮ ಋಷಿಯ ವೇಷದಲ್ಲಿ ಬಂದು ಅಹಲ್ಯೆಯ ಸಂಗ ಮಾಡಿದುದು ಒಂದು ಉದಾಹರಣೆ. ಇಂದ್ರನು ಶ್ರೇಷ್ಠ ದೇವನಾದರೆ ಅನೈತಿಕಪ್ರಣಯ ಮಾಡುವ ದೇವರ ಆದರ್ಶವನ್ನು ಜನರು ಏನೆಂದು ತಿಳಿಯಬೇಕು ? ಗೌತಮಋಷಿಯು ಇಂದ್ರನ ದೇಹದ ಮೇಲೆ ಸಾವಿರ ಯೋನಿಗಳಾಗಲೆಂದು ಶಾಪಕೊಡುವುದು ಇನ್ನೂ ವಿಚಿತ್ರವಾಗಿದೆ. ಆದರೆ ರಾತ್ರಿಯಲ್ಲಿ ಕಾಣುವ ಸಾವಿರಾರು ನಕ್ಷತ್ರಗಳುಳ್ಳ ಆಕಾಶದ ನೆನಪನ್ನು ತಂದರೆ ಈ ಕಥೆಯು ಇಂದ್ರ ರಾತ್ರಿಯ ಕಾಲದ ಆಕಾಶವೆಂಬುದು ತಟ್ಟನೆ ತಿಳಿಯುತ್ತದೆ.

ಇಂದ್ರನು ಎತ್ತಿನ ರೂಪದಲ್ಲಿ ಬಂದು ದ್ಯೌಸ್ (ಆಕಾಶ)ನ ಮಗಳನ್ನು (ಪ್ರಾತಃಕಾಲವನ್ನು) ಓಡಿಸಿಕೊಂಡು ಹೋಗುತ್ತಾನೆ.

ಎಂಬ ವರ್ಣನೆ ಋಗ್ವೇದದಲ್ಲಿದೆ. ಮೆಕ್ಸ್‌ಮುಲರರು ಇದನ್ನು ಗ್ರೀಕ್ ಪುರಾಣಕಥೆಗಳೊಡನೆ ಹೋಲಿಸಿದ್ದಾರೆ. ಗ್ರೀಕ್ ದೇವತೆ ಅಪ್ರೋಲೋ, 'ಫ್ರೈಬಸ್' ಅಂದರೆ ಬೆಳಕಿನ ಪ್ರಭು ಅವನು ದಫ್ನೆ (ಸಂಸ್ಕೃತ ದಹನಾ, ಪ್ರಾತಃಕಾಲ) ಎಂಬ ಸುಂದರಿಯನ್ನು ಮೋಹಿಸಿ ಬೆಂಬತ್ತುತ್ತಾನೆ. ಮತ್ತೊಂದು ಕಥೆಯ ಪ್ರಕಾರ ಅಪ್ರೋಲೋ ತನ್ನ ಕರಗಳಿಂದ ಅವಳನ್ನು ಆಲಿಂಗಿಸುತ್ತಾನೆ. (ಅವರು ಲಾರೆಲ್‌ವೃಕ್ಷವಾಗುತ್ತಾಳೆಂದು ಆ ಕಥೆಯಲ್ಲಿದೆ. ದಫ್ನೆ ಯೆಂಬ ಶಬ್ದಕ್ಕೆ ಲಾರೆಲ್‌ವೃಕ್ಷವೆಂಬ ಅರ್ಥವಿರುವದು. ಅವಳು ಲಾರೆಲ್‌ವೃಕ್ಷವಾಗಿ ರೂಪಗೊಂಡ ಕಥೆಗೆ ಕಾರಣ) ಜ್ಯೂಸ್ ದೇವನು ಎತ್ತಿನರೂಪದಲ್ಲಿ ಯುರೋಪಾ ಎಂಬ ಸುಂದರಿಯನ್ನು ಸಂಧಿಸುತ್ತಾನೆ (ಋಗ್ವೇದದ ಪ್ರಜಾಪತಿಯ ಕಥೆಯ ಛಾಯೆ ಯಿಲ್ಲಿದೆ.) ದಾನೇ ಎಂಬ ಸುಂದರಿಯನ್ನು ಅವನು ಚಿನ್ನದ ನಾಣ್ಯಗಳ ಮಳೆಯ ರೂಪದಿಂದ ಸೇರುತ್ತಾನೆ. ಚಿನ್ನದ ಮಳೆ ಪ್ರಾತಃಕಾಲದ ಸಂಧ್ಯೆಯ ಸೂರ್ಯನ ಕಿರಣಗಳೆಂಬುದು ಹೊಳೆಯುತ್ತದೆ.

ಜ್ಯೂಸ್ ದೇವನ ಹೆಂಡತಿ ಹೀರಾ (Here ಹೊಳೆಯುವ ಆಕಾಶ ಅಥವಾ ಹೀರಾ–ಈರಾ ಇಲಾ ಭೂದೇವಿ– ಹೀಗೆಯೂ ಅರ್ಥಮಾಡಲಾಗಿದೆ.)

ಗ್ರೀಕ ಪುರಾಣದ ಯುರೇನಸ್‌ನ ಮಗ ಕ್ರೊನೊಸ್. ಕ್ರೊನೊಸ್ ಅಂದರೆ ಕಾಲ. ಅವನು ಜ್ಯೂಸ್‌ನ ತಂದೆ. ಮಗನು ತನ್ನ ಅಧಿಕಾರವನ್ನು ಕಿತ್ತುಕೊಳ್ಳುವನೆಂಬ ಭವಿಷ್ಯವಿದ್ದುದರಿಂದ

ಕ್ರೊನೊಸ್ ತನ್ನ ಮಕ್ಕಳು ಹುಟ್ಟಿದಕೂಡಲೇ ನುಂಗುತ್ತಾನೆ! ಆರುಜನರನ್ನು ನುಂಗಿದಮೇಲೆ ಅವನ ಹೆಂಡತಿ ರ್ಹೀ (ಭೂಮಿ) ತನ್ನ ಏಳನೆಯ ಮಗುವನ್ನುಳಿಸಿಕೊಳ್ಳಲು ಕಂಬಳಿಯಲ್ಲಿ ಕಲ್ಲು-ಗುಂಡನ್ನು ಸುತ್ತಿ ಗಂಡನಿಗೆ ಕೊಡುತ್ತಾಳೆ. ಕ್ರೊನೊಸ್ ತನ್ನ ಮಗುವೆಂದು ಅದನ್ನೇ ನುಂಗುತ್ತಾನೆ! ಕ್ರೀಟ್ ದ್ವೀಪಕ್ಕೆ ಸ್ಥಳಾಂತರ ಹೊಂದಿದ ಜ್ಯೂಸ್‌ನನ್ನು ಕುರುಬರ ಕನ್ಯೆಯರು ಸಾಕುತ್ತಾರೆ. ಆಮೇಲೆ ಅವನು ತಂದೆಯಮೇಲೆ ಯುದ್ಧ-ಮಾಡಿ ಅವನನ್ನು ಸೋಲಿಸಿ, ಅವನು ನುಂಗಿದ್ದ ತನ್ನ ಆರೂ ಅಣ್ಣಂದಿರನ್ನು ಕಾರುವಂತೆ ಮಾಡುತ್ತಾನೆ. (ಕ್ರೊನೊಸ್‌ನ ಕಥೆಯಲ್ಲಿ' ಆಕಾಶದಿಂದ ಮರೆಯಾದ ಸೂರ್ಯನ ಕಥೆ-ಯಿದ್ದಂತೆ ಕಾಣುತ್ತದೆ. ಸೂರ್ಯನಿಂದಲೇ ಕಾಲನಿರ್ಣಯ ವಾಗುವುದಾದರೂ ಕಾಲವು ಸೂರ್ಯನಿಲ್ಲದಂತೇ ಮಾಡಲು ಹೆಣಗುತ್ತದೆಯೆಂಬ ಕಲ್ಪನೆ ಈ ಕಥೆಯನ್ನು ರೂಪಿಸಿರಬೇಕು.)

ಜ್ಯೂಸ್ ದೇವನು ಮೆಟಿಸ್ ಎಂಬ ಸ್ತ್ರೀದೇವತೆಯನ್ನು ನುಂಗಿದ ಅನಂತರ ಅವನ ತಲೆಯಲ್ಲಿ ವೇದನೆಯಾಯಿತು. ಆಗ ಹೆಫೆಸ್ಟಸನೆಂಬ ಕಮ್ಮಾರದೇವನು ತನ್ನ ಸುತ್ತಿಗೆಯಿಂದ ಜ್ಯೂಸ್‌ದೇವನ ತಲೆಯನ್ನು ಸೀಳಿದಾಗ ಅಥೀನಿದೇವಿಯು ಜ್ಯೂಸ್ ದೇವನತಲೆಯಿಂದ ಹೊರಗೆ ಬಂದಳು; ತಲೆಯಿಂದ ಹುಟ್ಟಿದ ಅವಳು ಬಹಳ ಬುದ್ಧಿಶಾಲಿನಿ. ಆದರೆ ಹೆಂಗಸರನ್ನು ನುಂಗಿ ಗಂಡಸರು ತಲೆಯಲ್ಲಿ ಮಕ್ಕಳನ್ನು ಪಡೆಯುವರೆಂಬ ವಿಚಿತ್ರಕಥೆಯನ್ನು ನಂಬುವಂತೆಯೇ ಇಲ್ಲ. (ಆದರೆ ತಲೆಯಲ್ಲಿ ಇಂಥ ಅಥವಾ ಇನ್ನೂ ವಿಚಿತ್ರ ಕಲ್ಪನೆಗಳು ಹುಟ್ಟುವವೆಂಬು-

ದೇನೋ ನಿಜ!) ಅಥನಿ 'ಅಹನ' ಎಂಬಂತೆ ಪ್ರಾತಃಕಾಲ. ಆಕಾಶದಿಂದ ಅಥವಾ ಕತ್ತಲೆಯನ್ನು ನುಂಗಿದ ಸೂರ್ಯನಿಂದ ಪ್ರಾತಃಕಾಲ ಉದ್ಭವ ಹೊಂದಿತು ಎಂಬ ಅರ್ಥವಿಲ್ಲಿ ಸಮಂಜಸ ವಾಗುತ್ತದೆ. ಗ್ರೀಕರ ಅರೆಸ್ (ಲ್ಯಾಟಿನ್ ಪುರಾಣದ ಮಾರ್ಸ್) ಎಂಬವನು ಯುದ್ಧದೇವನು. ವೇದದ ಮರುತ್, (ಗಾಳಿಗಳು) ಈ ದೇವತೆ ಒಂದೇ ಎಂದು ಮೆಕ್ಸ್‌ಮುಲರ್ ಬರೆದಿದ್ದಾರೆ.

ಜ್ಯೂಸ್‌ದೇವನ ಕಿರಿಯಮಗ ಈರೋಸ್ (Eros) ಕಾಮದೇವ. (ಕೆಲವು ಗ್ರೀಕಪುರಾಣಕಾರರು ಕಾಮವಿಲ್ಲದೆ ಜಗತ್ತಿನ ಸೃಷ್ಟಿಯೇ ಸಾಧ್ಯವಿಲ್ಲವೆಂದು ಈರೋಸ್ ಪ್ರಥಮ ದೇವನೆಂದು ತಿಳಿದಿದ್ದರೆಂಬುದು ಆತ ಆದಿದೇವನೆಂದು ಹೇಳುವ ಕಥೆಯಿಂದ ತಿಳಿಯುತ್ತದೆ.) ಅವನು ಸಂಸ್ಕೃತದ ಅರುಷ ಅಂದರೆ ಸೂರ್ಯನ ಪ್ರತೀಕವೆಂದು ಮೆಕ್ಸ್‌ಮುಲರರ ಅಭಿಪ್ರಾಯ. ಅರುಷ ಉದಯಿಸುವ ಸೂರ್ಯ. ಋಗ್ವೇದ ದಲ್ಲಿ ಸೂರ್ಯನಿಗೆ ಒಮ್ಮೆ ಕಾಮನೆಂದು ಹೇಳಿದ್ದುದನ್ನು ಅವರು ಎತ್ತಿ ಹೇಳಿದ್ದಾರೆ. ಸೂರ್ಯನಿಂದಲೇ ಈ ಜಗತ್ತಿನ ಉಗಮ. ಅವನೇ ಅದರ ಪೋಷಕ. (ಪ್ರಾತಃಕಾಲದ ಸೂರ್ಯನು ಮೂಡುವಾಗಿನ ಕೆಂಬಣ್ಣದ ಆಗಸವು ಕಾಮನನ್ನು ಶಿವನು ಹಣೆಗಣ್ಣಿನಿಂದ ಸುಟ್ಟುರುಹಿದ ಕಥೆಗೆ ಕಾರಣವಾಗಿದ್ದಿರ ಬಹುದೇ?)

ಟ್ಯೂಟನ್ನರ ಪುರಾಣಕಥೆಯು ದೇವತೆಗಳ ಹಾಗೂ ಜಗತ್ತಿನ ಉಗಮದ ಕುರಿತು ಹೀಗೆ ಹೇಳುತ್ತದೆ: ಮೊದಲು

ಎಲ್ಲ ಕಡೆ ನಿರ್ವಾಯುಲು ತುಂಬಿತ್ತು. ಸಮುದ್ರ, ಭೂಮಿ, ಆಕಾಶ ಯಾವುದೂ ಇರಲಿಲ್ಲ. ಮೊದಲಿಗೆ ಕಾಲದ ವಿಷಯುವಾಯಿತು. ಮಹಾದೇವನು ಜಗತ್ತನ್ನು ಸೃಷ್ಟಿಸುವಾಗ ಕತ್ತಲೆಯ ನಿಫೆಲ್‌ಹೈಮ್ ಎಂಬ ಭಾಗದಿಂದ ಹ್ವೆರ್ಗೆಲ್‌ಮರ್ ಎಂಬ ಸೆಲೆ- ಯನ್ನು ಸೃಷ್ಟಿಸಿದನು. ಅದರಿಂದ ಹನ್ನೆರಡು ನದಿಗಳು ಹರಿದವು. ಹಿಮವೃಷ್ಟಿಯಾಯಿತು. ಅರಲು ದೈತ್ಯ(Clay giant) ಯಿಮೆರ್ (ಭೂಮಿ) ಉದ್ಭವಿಸಿದನು. ಆಕಾಶದ ಔಧುವಾ ಎಂಬ ಕಾರ್ಗತ್ತಲೆಯ ಆಕಳಿನ ನಾಲ್ಕು ಮೊಲೆಗಳಿಂದ ಹೊರಟ ಹಾಲನ್ನು ಪಿಪಾಸೆಯಿಂದೀಂಟಿದನು ಯಿಮೆರ್ ದೈತ್ಯ. ನಿದ್ರಿಸಿದ ಅವನ ಬೆವರಿನಿಂದ ಮಹಾದೇವನು ಮಿಮರ್ ಎಂಬ ಮಗನನ್ನೂ ಬೆಸ್ಟ್ಲಾ ಎಂಬ ಮಗಳನ್ನೂ ಉಂಟು ಮಾಡಿದನು. ಯಿಮೆರ್ ದೈತ್ಯನ ಕಾಲುಗಳೆಡೆಯಿಂದ ಆರು ತಲೆಗಳುಳ್ಳ ದೈತ್ಯ ಹುಟ್ಟಿದನು. ಅವನು ಹಿಮದೈತ್ಯರ ಜನಕ.

ಔಧುಮ್ಲಾ ಆಕಳು ಶಿಲೆಗಳನ್ನು ನೆಕ್ಕಿದ್ದರಿಂದ ಬುರ ಎಂಬ ಅಸ (ಸ್ವರ್ಗ) ದೇವತೆಗಳ ಜನಕ ಹುಟ್ಟಿದನು. ಅವನ ಮಗನೇ ಓಡಿನ್. ಓಡಿನ್ ಇವರಂತೆಯೇ ಮೂಲದಲ್ಲಿ ನಿಸರ್ಗ ದೇವತೆ. ಆಕಾಶದ ಗಾಳಿಯ ದೇವತೆ. ಓಡಿನ್ನನ ಇಬ್ಬರು ತಮ್ಮಂದಿರಲ್ಲಿ ಲೋಕಿ (Loke) ಅಗ್ನಿದೇವ, ದುಷ್ಟಶಕ್ತಿ, ಸೂರ್ಯ-ಚಂದ್ರರು ಅವನ ಮಕ್ಕಳು. ಸಮುದ್ರದ ಬಿರುಗಾಳಿ ಈಗಿರ್ ಎಂಬ ದೈತ್ಯ. ಹಿಮವು ಹ್ರಿಂ ಎಂಬ ದೊಡ್ಡ ದೈತ್ಯ. ಕತ್ತಲೆಯಿಂದ ಹುಟ್ಟಿದ ದುಷ್ಟಶಕ್ತಿಗಳು ದೈತ್ಯರು. ಇತರ ಅನೇಕ ಪುರಾಣಗಳಲ್ಲಿಯಂತೆ ಇಲ್ಲಿಯೂ ಈ ದೈತ್ಯ

(ಜೋಟುನ್)ರಿಗೂ ದೇವತೆಗಳಿಗೂ ಸಮರವಾಗುತ್ತದೆ.

ಟ್ಯೂಟನ್ನರ ಈ ಪುರಾಣದಲ್ಲಿ ಮೊದಲಿಗೆ ಮಿಸ್ಟೆಲ್‌ಟೊ (mistelioe) ಎಂಬ ಓಕ್ ಮರದ ಬಂದಳಿಕೆಯು ದೇವತೆಯಾಗಿದ್ದಿರಬಹುದಾದ ಬಾಲ್ಡರ್ ಅನಂತರ ಸೂರ್ಯದೇವನಾಗುತ್ತಾನೆ. ಚಿನ್ನದ ಬಣ್ಣದಿಂದೊಪ್ಪುವ ಬಹುಸುಂದರನಾದ ಅವನಿಗೆ ಅವನ ತಾಯಿಯು ಅನೇಕ ಪ್ರಾಣಿಗಳಿಂದ ಸಾಯದ ರಕ್ಷಣೆಯನ್ನೊದಗಿಸಿದ್ದಳು. ಆದರೆ ದುಷ್ಟಲೋಕಿ ಒಂದು ಬಂದಳಿಕೆಯ ಬಾಣವನ್ನು ಹೊಡುರ್ ದೇವನಿಗೆ ಕೊಟ್ಟು ಬಾಲ್ಡರನನ್ನು ಕೊಲ್ಲುವಂತೆ ಮಾಡಿದನು. ಬಾಲ್ಡರ್ ಮರಣ ಕೆಂಪುಬಣ್ಣದಿಂದ ಅಸ್ತಂಗತನಾಗುವ ಸೂರ್ಯನ ಸಂಕೇತ. (ಬಾಲ್ಡರ್‌ನ ತಂದೆ ಓಡಿನ್‌ನ ಒಂದೇ ಕಣ್ಣು ಸೂರ್ಯನ ಸಂಕೇತವೆಂಬ ಅಭಿಪ್ರಾಯುವಿದೆ.)

ಆಕಾಶದಲ್ಲಿ ಬಿರುಗಾಳಿಯಲ್ಲಿ ಚಲಿಸುವ (ಮೋಡಗಳ) ಕುದುರೆಗಳನ್ನೇರಿ ಕಾಳಗಮಾಡುವ ವಾಲ್ಕಿರಿ (Valkyrie) ಗಳೆಂಬ ಅಪ್ಸರೆಯರು ಮಡಿದ ವೀರರನ್ನು ಅಸ್ಗರ್ಡ್ ಎಂಬ ಸ್ವರ್ಗದ ಮೇಲ್ಭಾಗವಾದ 'ವಲ್ಹಲ'ಕ್ಕೆ ಒಯ್ಯುತ್ತಾರೆ.

ಇಜಿಪ್ತದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಸ್ಥಾನಿಕ (ದೇವತೆಯಿದ್ದರೂ ರಾಸೂರ್ಯ) ಇಜಿಪ್ತದ ಜನರ ಮುಖ್ಯದೇವತೆ. ಹೊರ್ ಅಂದರೆ ಆಕಾಶ ಹೋರಸ್ ಎಂಬ ಗಿಡಗನ ರೂಪದಲ್ಲಿಯೂ ಸೂರ್ಯನನ್ನು ಪೂಜಿಸುತ್ತಿದ್ದರು. (ಸಂಸ್ಕೃತ, ಗ್ರೀಕ್ ಹೋರಾ) ಭೂಮಿ ಗೆಬ್ ಎಂಬ ಪುರುಷದೇವತೆ.

ನಟ್ ಅಥವಾ ಹಾಥೊರ್ ಆಕಾಶದೇವಿ. ಅವಳ ಮಗ ಥೊತ್ (ಚಂದ್ರ) ದೇವ. ಅಪೆಪ್ ಎಂಬ ದುಷ್ಟಸರ್ಪ ಸೂರ್ಯನನ್ನು ಗ್ರಹಣ ಕಾಲದಲ್ಲಿ ನುಂಗುತ್ತದೆ. (ರಾಹು ಕೇತುಗಳ ಪುರಾಣಕಥೆಗಳ ಹೋಲಿಕೆ ಇಲ್ಲಿದೆ.) ಇಜಿಪ್ತ ದೇಶದಲ್ಲಿ ಆಮೇಲೆ ಒಸಿರಿಸ್ ದೇವತೆಯ ಪೂಜೆ ಪ್ರಾಬಲ್ಯಕ್ಕೆ ಬಂತು. ಅವನ ರಾಣಿ ಇಸಿಸ್ ಸೂರ್ಯನ ಪ್ರಭೆಯೆಂಬ ಹೇಳಿಕೆಯಿದೆ. ಒಸಿರಿಸ್ ಮೂಲದಲ್ಲಿ ಸೂರ್ಯದೇವನೇ ಸರಿ.

ಅಯರ್ಲಂಡದ ಕೆಲ್ಟಿಕ್ ಜನರಲ್ಲಿ ವೃಕ್ಷಪೂಜಕರಾದ ಡ್ರುಯಿಡರೆಂಬ ಕ್ರೂರ ನರಬಲಿಕಾರರು ಹೊಳೆ, ಪರ್ವತ, ವೃಕ್ಷ ಇತ್ಯಾದಿ ನೈಸರ್ಗಿಕ ಶಕ್ತಿಗಳ ಪೂಜಾರಿಗಳಾಗಿದ್ದರು. ಅವರಲ್ಲಿ ಬೆಳಕಿನ ದೇವತೆಗಳ ಒಂದು ಪಂಗಡವೂ ಕತ್ತಲೆಯ ಚಳಿಗಾಲದ ದೈತ್ಯರ ಪಂಗಡಗಳೂ ಇದ್ದವು. ಕ್ರೊಮ್ ಕ್ರುವಚ್ ಎಂಬ ಶಿಲಾರಾಶಿಯ (mound) ರೂಪದಲ್ಲಿ ಪೂಜಿಸಲ್ಪಡುವ ದೇವನು ಸ್ವರ್ಗದೇವನಾಗಿದ್ದನು. ಸೂರ್ಯನ ಗತಿಯ ಸಂಬಂಧದ ಹಬ್ಬಗಳು ಮುಖ್ಯವಾಗಿದ್ದವು. ಅವರಿಗಿಂತ ಹಿಂದಿನ ಅಯರ್ಲಂಡದ ಮೂಲನಿವಾಸಿಗಳಾದ ಗೇಲ್ ಜನಾಂಗದವರ ಮುಖ್ಯದೇವತೆ ದನು ಎಂಬವಳು. ಅವಳ ಮಕ್ಕಳು ಆಕಾಶ ದೇವತೆಗಳು. ನುಅಡ ಎಂಬವನೂ ದೈತ್ಯರು ಅವನನ್ನು ಕೊಂದ ಮೇಲೆ ದಗ್ದ ಎಂಬವನೂ ಅವರಲ್ಲಿ ಮುಖ್ಯರು. ಮುಂದೆ ಲುಗ್ ಅಥವಾ ಸೂರ್ಯನು ಮುಖ್ಯ ದೇವತೆಯಾದನು. ಸಮುದ್ರದ ಫೊಮೊರ್ ದೈತ್ಯರು ಪ್ರಾಣಿಮುಖಗಳುಳ್ಳವರು. ಬಾಲೊರ್ ಎಂಬ ಕೆಟ್ಟಕಣ್ಣಿನ ದೈತ್ಯ

ಅವರಲ್ಲಿ ಮುಖ್ಯನು. ಲೀರ್ ಸಮುದ್ರದೇವ (ಶೆಕ್ಸಪಿಯರನ ರಾಜ ಲಿಯರನ ಮೂಲ ಪುರಾಣಪುರುಷ.)

ಜಪಾನಿನ ದೇವತೆಗಳಲ್ಲಿ ಅಮಟೆರಸು ಎಂಬವಳು ಸೂರ್ಯದೇವಿ. ಅವಳು ಜಪಾನಿನ ಚಕ್ರವರ್ತಿಗಳ ಮೂಲ ಮಾತೃವೆಂದು ನಂಬಿಕೆಯಿದೆ. ಅವಳು ಸೃಷ್ಟಿಕರ್ತನಾದ ಇಜಾನಾಗಿಯ ಎಡಗಣ್ಣಿನಿಂದ ಹುಟ್ಟಿದವಳು. ಅವಳ ಸೋದರ ಸುಸೊನೂ ಎಂಬವನು ಪಾತಾಳ ದೇವತೆ ಅವನ ಕಾಟ ತಾಳಲಾರದೆ ಅವಳು ಒಂದು ಗವಿಯಲ್ಲಿ ಅಡಗಿ ಕೊಂಡಳು. ಅದರಿಂದ ಜಗತ್ತಿನಲ್ಲಿ ಸಂಪೂರ್ಣ ಕತ್ತಲೆ ಆವರಿಸಿತು. ಉಳಿದ ದೇವತೆಗಳು ಬಹಳ ಕಷ್ಟಪಟ್ಟು ಅವಳು ತನ್ನ ಗುಹೆಯಿಂದ ಹೊರಟು ಬರುವಂತೆ ಮಾಡಿದರು. ಇಲ್ಲದಿದ್ದರೆ ಮುಂದೆ ಹಗಲುಗಳೇ ಆಗುತ್ತಿರಲಿಲ್ಲ. ಇನರಿ ಎಂಬ ಬತ್ತದ ದೇವತೆಯ ಪ್ರತೀಕವಾದ ನರಿಯು ಈ ದೇವತೆಗೆ ಪವಿತ್ರಪ್ರಾಣಿ. ಜ್ವಾಲಾಮುಖಿ ಪರ್ವತ ಫುಜಿಯಾಮಾ ಪವಿತ್ರವಾದುದು.

ನಿಸರ್ಗಪೂಜಕರಾದ ಮೆಕ್ಸಿಕೋದ ಕೆಂಪು ಇಂಡಿಯನ್ನರ ದೇವರಲ್ಲಿ ಟೆಜ್‌ಕಟ್ಲಿಪ್ರೋಕ ಸೂರ್ಯದೇವ. ಆ ಬರಗಾಲದ ದೇಶಕ್ಕೆ ಮಳೆಯನ್ನು ತರುವ ವ್ಯಾಪಾರೀ ಗಾಳಿಯ ಪ್ರತೀಕ ವಾದ ದೇವನು ಕ್ವಿಟಜಲಕೋಟ್ಲ. ಸಿಂಟಿಯೊಟ್ಲ ಎಂಬ ಗೋವಿನ ಜೋಳದ ದೇವತೆ ಪಾತಾಳದೇವನೂ ಆಗಿದ್ದನು.

ಸುಮೇರಿಯನ್ನರ ಅದಾರ್ ದೇವನು ಬಿರುಗಾಳಿಯ ದೇವ. ಎತ್ತಿನ ಮೇಲೆ ನಿಂತಿರುವವನು. ಅವನ ಕೈಯಲ್ಲಿ ವಜ್ರಾ

ಯುಧವಿದೆ, ಗುಡುಗು–ಮಿಂಚು ಬಿರುಗಾಳಿ ಸಿಡಿಲುಗಳಿಂದ ಪ್ರಳಯಂಕರನಾದ ದೇವನು ನಮ್ಮ ವೇದದ ರುದ್ರನ ಹಾಗೆ ಪ್ರಬಲ ಪ್ರತಾಪಿ. ಅವನು ಮಳೆ ಹೊಯ್ಯುವಂತೆ ಮಾಡು ವದರಿಂದ (ರುದ್ರ) ಶಿವನೂ ಆಗಿದ್ದಾನೆ. ಸುಮೇರಿಯನ್ನರ ಶಮಾಶ್ (ಸೂರ್ಯ) ದೇವನು ರಾತ್ರಿಯನ್ನೂ ಚಳಿಗಾಲವನ್ನೂ ಸೋಲಿಸುತ್ತಾನೆ.

ಮೊದಲಿಗೆ ಋಗ್ವೇದದ ಇಂದ್ರನು ಎಲ್ಲ ದೇವರುಗಳ ಪ್ರತಿನಿಧಿ ಸ್ವರೂಪನಾದ ಒಬ್ಬನೇ ದೇವನಾಗಿದ್ದನು. (ಇಂದ್ರ ಅಂದರೆ ಸೂರ್ಯ ಎಂಬ ಅಭಿಪ್ರಾಯವೂ ಉಂಟು) ಕ್ರಮೇಣ ಸೂರ್ಯ, ಅಗ್ನಿ, ವರುಣ, ರುದ್ರ, ಯಮ ಇತ್ಯಾದಿ ದೇವತೆ ಗಳ ವಿಕಾಸವಾಯಿತು. ಸೂರ್ಯನ ಮಗ ಯಮ ಎಂದು ಹೇಳಿದೆ. ಆದರೆ ಯಮನು ಸಹ ಸೂರ್ಯನ ಸಂಕೇತವೇ ಸರಿ. ಸೂರ್ಯನು ಮುಳುಗಿದ ಮೇಲೆ ಅವನು ಮಡಿದವರು ಹೋಗುವ ಲೋಕದ ಪ್ರಭುವಾಗಿ ಯಮನಾದನು. (ಇಜಿಪ್ತಿನ ಸೂರ್ಯದೇವ ರಾ ಎಂಬವನು ಪ್ರಾತಃಕಾಲದಲ್ಲಿ ಚಿಕ್ಕಮಗು ವಾಗಿ ಹುಟ್ಟಿ, ಮಧ್ಯಾಹ್ನ ತರುಣನಾಗಿ ಬೆಳೆದು ಸಂಜೆ ಮುದು ಕನಾಗಿ ಸಾಯುತ್ತಾನೆ. ಪ್ರತಿದಿನ ಸೂರ್ಯನು ಮುಳುಗಿ ಮಡಿದು ಮರುದಿನ ಹೊಸ ಸೂರ್ಯನ ಉದಯವಾಗುವದೆಂದು ಪ್ರಾಚೀನರಲ್ಲಿ ಹಲವರ ತಿಳಿವಳಿಕೆಯಿದ್ದಿರಬೇಕು.)

ವೇದದ ಊರ್ವಶೀ–ಪುರೂರವರ ಕಥೆಯಲ್ಲಿ ಊರ್ವಶಿ ಉಷಃಕಾಲ. ಪುರೂರವ ಸೂರ್ಯ. ಉಷಃಕಾಲ ಸೂರ್ಯರ

ಸಮಾಗಮ ಸ್ವಲ್ಪಕಾಲಮಾತ್ರವಿರುತ್ತದೆ. ನಿರ್ವಾಣ ಸ್ವರೂಪದಲ್ಲಿ ತನಗೆ ಪುರೂರವನು ಕಾಣಬಾರದೆಂದ ಮಾತನ್ನು ಪುರೂರವನು ಮೀರಿದನೆಂದು ಊರ್ವಶಿ ಅವನಿಂದ ಅಗಲಿ ಹೋಗುತ್ತಾಳೆ. ಮತ್ತೊಮ್ಮೆ ಅವನನ್ನು ಸಂಧಿಸಿದಾಗ ನೀನೂ ಗಂಧರ್ವರನ್ನು ಮೆಚ್ಚಿಸಿ ಅಮರತ್ವವನ್ನು ಪಡೆಯೆಂದು ಅವಳು ಹೇಳುತ್ತಾಳೆ. ಋಗ್ವೇದದಲ್ಲಿ ಅವಳ ಹೋಲಿಕೆಯನ್ನು ಉಷೆಯೊಡನೆಯೇ ಮಾಡಿದುದುಂಟು.

ಗ್ರೀಕರ ಅಪೋಲೋ ಮಂಜಿನ ಮಕ್ಕಳಾದ ನಿಯೋಬ್‌ರನ್ನು ಕೊಲ್ಲುತ್ತಾನೆ. ಋಗ್ವೇದದಲ್ಲಿ ಸೂರ್ಯನು ಕತ್ತಲೆಯ ಸರ್ಪಗಳನ್ನು ಕೊಂದು ಮೂಡಿ ಬಂದನೆಂದು ವರ್ಣನೆಯಿದೆ. ಪ್ರಾತಃಕಾಲ ಸಂಧ್ಯಾಕಾಲಗಳ ಆಕಾಶ ಕೆಂಬಣ್ಣದಿಂದ ರಂಜಿಸಿದಾಗ ಸೂರ್ಯನು ಮಂದೇಹರೆಂಬ ರಾಕ್ಷಸರನ್ನು ಕೊಂದು ಆಗಸವು ಕೆಂಪಗಾಯಿತೆಂಬ ಪುರಾಣ ಕಥೆಯಿದೆ.

ಮುಂಡ ಜನಾಂಗದವರು ಆಕಾಶಗಂಗೆ (ನೀಹಾರಿಕಾಪುಂಜ)ಯನ್ನು ಗಾಯಿ ಹೋರಾ ಅಂದರೆ ಆಕಳುಗಳ ದಾರಿ ಎಂದು ಕರೆಯುತ್ತಾರೆ. ಸಿಂಗ್‌ಬೊಂಗಾ ಎಂಬವನು ಪ್ರತಿದಿನವೂ ಆ ದಾರಿಯಿಂದ ತನ್ನ ಆಕಳುಗಳ ಹಿಂಡನ್ನು ಹೊಡೆದುಕೊಂಡು ಹೋಗುತ್ತಾನೆ. ಆಕಳುಗಳ ಹಿಂಡಿನ ಹೆಜ್ಜೆಯಿಂದ ಎದ್ದ ಧೂಳು ನೀಹಾರಿಕಾಪುಂಜದ ರೂಪದಲ್ಲಿ ಕಾಣುತ್ತದೆಯೆಂದು ಆ ಜನರು ಕಥೆ ಹೇಳುತ್ತಾರೆ.

ಸೂರ್ಯನು ಆಕಾಶದ ವಿಸ್ತಾರದಲ್ಲಿ ಹಬ್ಬಿ ಚಲಿಸುವವನಾದ ಕಾರಣ ವಿಷ್ಣುವೆಂಬ ಹೆಸರು ಅವನಿಗೆ ಋಗ್ವೇದದಲ್ಲಿ ಬಂದಿದೆ. ಪುರುಷಸೂಕ್ತದ ಮಂತ್ರ (ಋಗ್ 1-22-18) (ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ) ದಲ್ಲಿ ಸೂರ್ಯನ ಆಕಾಶದಲ್ಲಿನ ಗತಿಯ ಹೆಜ್ಜೆಗಳೇ ವರ್ಣಿತವಾಗಿವೆಯೆಂದು ಸಾಯಣರ ಭಾಷ್ಯದಲ್ಲಿದೆ. ಕತ್ತಲೆಯ ಪ್ರತೀಕನಾದ ಬಲಿದೈತ್ಯನನ್ನು ತನ್ನ ಪಾದ (ಹೆಜ್ಜೆ) ದಿಂದ ಸೂರ್ಯನು ಪಾತಾಳಕ್ಕಟ್ಟಿದನು. ಇದು ಮುಂದೆ ಬೆಳೆದ ವಾಮನ ಪುರಾಣಕ್ಕೆ ಮೂಲವಾಗಿದೆ. (ಗೋ ಅಂದರೆ ಭೂಮಿಯನ್ನು ಪಾ(ಪಾಲಿಸುವ) ಸೂರ್ಯನು ಮುಂದೆ ಕೃಷ್ಣನ ಗೋಪಜೀವನದ ಪುರಾಣ ಕಥೆಗೆ ಪ್ರೇರಕನಾದನೆಂದು ಕೆಲವು ವಿದ್ವಾಂಸರ ಅಭಿಪ್ರಾಯ) ಸೂರ್ಯನ ಚಕ್ರಪಾಣಿ ಎಂಬ ಹೆಸರು ವರ್ಷಚಕ್ರದಲ್ಲಿನ ಅವನ ಗತಿಯನ್ನು ಸೂಚಿಸುವದಂತೆ (ಋಗ್ 1-104). ಚಕ್ರ ಸೂರ್ಯಬಿಂಬದ ಸಂಕೇತವಾಗಿದ್ದಿರಬಹುದು. ಇಜಿಪ್ತದ ಹೋರಸ್ ಗಿಡಗನ ರೂಪದ ದೇವಸೂರ್ಯಬಿಂಬವು ಗರುಡಪಕ್ಷಿಯ ಹಾಗೆ ಆಕಾಶದಲ್ಲಿ ಗಮನಮಾಡುವದರಿಂದ ವಿಷ್ಣುವಿಗೆ ಗರುಡವಾಹನ ಎಂಬ ಪುರಾಣ ಕಲ್ಪನೆ ಸೇರಲು ಕಾರಣವಾಗಿರಬೇಕು. (ಸೂರ್ಯನಿಗೆ ಋಗ್ವೇದವಲ್ಲಿ ಗರುಡನ ಹೋಲಿಕೆಯನ್ನು ಕೊಟ್ಟುದಿದೆ.) ಸೂರ್ಯನು ತನ್ನ ಬಿಂಬವನ್ನು ಮರೆಮಾಡಿ ಕತ್ತಲೆಗೆ ಕಾರಣನಾಗುವದರಿಂದ ಅವನಿಗೆ ಬಹಳ ಮಹತ್ವಪೂರ್ಣವಾದ ಕೃಷ್ಣ ಎಂಬ ಹೆಸರು ಬಂದಿತು ಎಂದು ಡಾ॥ ಗೋಸ್ವಾಮಿಯವರು ಬರೆದಿದ್ದಾರೆ. ಕೃಷ್ಣನು ವಿಷ್ಣುವಿನ ಅವತಾರವಾಗಿ ಅವನು

ಅಸುರಹರ, ಹರಿ, ಚಕ್ರಪಾಣಿ ಇತ್ಯಾದಿ ಪುರಾಣ ಕಥೆಗಳು ಅವನು ಸುತ್ತಲೂ ಬೆಳೆಯುವುದಕ್ಕೆ ಋಗ್ವೇದದ ಈ ವರ್ಣನೆಗಳು ಸಹಾಯಕವಾದವು.

ಕ್ರಿ. ಪೂ. ಐದನೆಯ ಶತಕದಲ್ಲಿಯೇ ಮೆಟ್ರೊಡೊಟಸ್ ಎಂಬವನು ಎಲ್ಲ (ಗ್ರೀಕ್) ಪುರಾಣಕಥೆಗಳೂ ಜಗತ್-ಸೃಷ್ಟಿಯ ಪುರಾಣವೆಂದೂ ಹವಾಮಾನದ ರಹಸ್ಯತಮ ಸೂಚನೆಯನ್ನುಳ್ಳ ಸಂಭಾಷಣೆಗಳಿಂದ ಕೂಡಿದ್ದವೆಂದೂ ಹೇಳಿದ್ದನು. ಈಗ ಹವಾಮಾನಕ್ಕೆ ಸಂಬಂಧಪಟ್ಟ ನಿಸರ್ಗ ಪುರಾಣ ಕಥೆಗಳ ಉದಾಹರಣೆಗಳನ್ನು ತೆಗೆದುಕೊಳ್ಳಬಹುದು.

ಇಜಿಪ್ತಿನ ಪುರಾಣದಲ್ಲಿ ಬಾಸ್ಟ್ ಎಂಬುದು ಸೂರ್ಯನ ಬೆಕ್ಕು ಬಿಸಿಲಿನಲ್ಲಿ ನಿಂತುಕೊಳ್ಳುವ ಪರಿಪಾಠವಿರುವ ಬೆಕ್ಕನ್ನು ಸೂರ್ಯನ ಸಹಚರಿಯನ್ನಾಗಿ ಮಾಡಿರುವರೆಂಬ ಊಹೆಯುಂಟು. ಒಮ್ಮೆ ಸಿಟ್ಟಿನಿಂದ ತನ್ನ ಹಾದಿಯನ್ನು ಬಿಟ್ಟು ಕುಶ್ ಪ್ರಾಂತಕ್ಕೆ ಹೋದ ಪುರಾಣಕಥೆಯಿದೆ. ಆ ಮೇಲೆ ಅವಳ ತಂದೆ ರಾದೇವನು ಮಗಳ ಅಗಲಿಕೆಯಿಂದ ನೊಂದು ಅವಳನ್ನು ಕರೆತರಲು ಥೋತ್‌ದೇವನನ್ನು ನಿಯಮಿಸುತ್ತಾನೆ. ಆ ದೇವನು ಸುಂದರ ಕಥೆಗಳನ್ನು ಹೇಳುತ್ತಲೂ ಅವಳ ಮುಂದೆ ನರ್ತನ ಮಾಡುತ್ತ ಅವಳ ಮನಸ್ಸಂತೋಷ ಪಡಿಸುತ್ತಲೂ ಅವಳನ್ನು ಕರೆತರುತ್ತಾನೆ. ಈ ಕ್ರಮ ವರ್ಷವರ್ಷವೂ ನಡೆಯುತ್ತದೆ. ಚಳಿಗಾಲದಲ್ಲಿ ಸೂರ್ಯನ ಗತಿಯು ದಕ್ಷಿಣಕ್ಕೆ ಸರಿದಿರುವ ಘಟನೆಯನ್ನು ಇದು ಸಾಂಕೇತಿಕವಾಗಿ ಸೂಚಿಸುತ್ತದೆ.

ಚಳಿಗಾಲ ಬೇಸಿಗೆ ಕಾಲಗಳ ಕುರಿತಾದ ಪುರಾಣಕಥೆಯೊಂದು ಮೆಸೊಪ್ರೊಟೇಮಿಯಾ ಸಾಹಿತ್ಯದಲ್ಲಿ ದೊರೆಯುತ್ತದೆ.

ಇಯಾ ಎಂಬ ಉದಕ (ವರುಣ) ದೇವನ ಮಗ ತಾಮೂಜ್. ಅವನು ಎರಿಡಾ ಎಂಬ ಮಹಾವೃಕ್ಷದ ನೆರಳಿನಲ್ಲಿ ಕುರಿಗಳನ್ನು ಮೇಯಿಸುತ್ತಿದ್ದಾಗ ಇಸ್ಟಾರ್ ದೇವತೆ ಅವನನ್ನು ಮೋಹಿಸಿದಳು. ಆದರೆ ಒಂದು ಕಾಡುಹಂದಿಯು ತನ್ನ ಕೋರೆ ಹಲ್ಲುಗಳಿಂದ ತಾಮೂಜ್‌ನನ್ನಿರಿದು ಕೊಂದು ಹಾಕಿತು. ಇಸ್ಟಾರ್ ತುಂಬ ದುಃಖದಿಂದ ಸಾವಿತ್ರಿಯಂತೆ ಅವನ ಆತ್ಮದ ಬೆನ್ನು ಹತ್ತಿ ಕತ್ತಲೆಯ ಲೋಕಕ್ಕೆ ಹೋಗಿ ತನ್ನ ಪ್ರಿಯನನ್ನು ಭೂಲೋಕಕ್ಕೆ ಕರೆತರುತ್ತಾಳೆ. ತಾಮೂಜ್ ವಸಂತಕಾಲದ ಪ್ರತೀಕವೆಂಬ ಊಹೆಯಿದೆ.

ಬೇಸಿಗೆಯಲ್ಲಿ ಪೃಥ್ವಿಯು ಸಸ್ಯಸಮೃದ್ಧವಾಗಿದ್ದ ಆರು ತಿಂಗಳ ಕಾಲ ಇಸ್ಟಾರ್ ಭೂಮಿಯ ಮೇಲಿರುತ್ತಾಳೆ; ಉಳಿದ ಆರು ತಿಂಗಳ ಶೀತ ಕಾಲದಲ್ಲಿ 'ಅರಲು' ಎಂಬ ಒಂದು ಲೋಕದಲ್ಲಿ ಬಂಧಿತಳಾಗಿ ಬಿದ್ದಿರುತ್ತಾಳೆ ಎಂದು ನಂಬುಗೆಯಿತ್ತು.

ಇಸ್ಟಾರಳ ತಂಗಿ 'ಎರಿಷ್ ಈ ಕಿಗಾಲ್' ಸತ್ತವರ ಲೋಕದ ದೇವಿ. ಅವಳ ಲೋಕಕ್ಕೆ ಹೋಗುವಾಗ ನಗ್ನರಾಗಿಯೇ ಪ್ರವೇಶಿಸಬೇಕೆಂಬ ನಿಯಮವಿತ್ತು. (ಫ್ರಾನ್ಸಿನ ಈಗಿನ ನಗ್ನಸಂಘಗಳ ಹಳೆಯ ಮಾದರಿ ಇಲ್ಲಿರಬೇಕು!) ಏಳು ಬಾಗಿಲುಗಳನ್ನು ದಾಟಿ ಇಸ್ಟಾರ್ ಒಳಗೆ ಹೋಗಬೇಕಾದರೆ

ಒಂದೊಂದು ಬಾಗಿಲಿನಲ್ಲಿಯೂ ಇದ್ದ ದ್ವಾರಪಾಲಕರು ಆಕೆ ಧರಿಸಿದ್ದ ಒಂದೊಂದು ಉಡುಪನ್ನು ತೊಡುಪನ್ನು ಸುಲಿದು ಕೊಳ್ಳುತ್ತಾರೆ. ಇದು ಚಳಿಗಾಲದಲ್ಲಿ ಮರಗಳ ಎಲೆಗಳು ಉದುರಿಬಿದ್ದುದರ ದ್ಯೋತಕ. ಆಕೆ ತಾಮೂಜನೊಡನೆ ತಿರುಗಿ ಬರುವಾಗ ಒಂದೊಂದು ಬಾಗಿಲಿನಲ್ಲಿಯೂ ತಾನು ಮೊದಲು ಕಳೆದಿದ್ದ ಉಡುಪನ್ನು ಮರಳಿ ಪಡೆದು ಸಿಂಗರಿಸಿಕೊಳ್ಳುತ್ತಾಳೆ. ಪ್ರಕೃತಿದೇವಿ ಎಲೆ-ಚಿಗುರು, ಹೂ–ಹಣ್ಣುಗಳಿಂದ ಸಿಂಗರಿಸಿ ಕೊಳ್ಳುವ ವಸಂತಕಾಲ ಇದರಿಂದ ಸೂಚಿತವಾಗಿದೆ

ಯುಗೋಸ್ಲಾವಿಯಾದ ಸೂರ್ಯದೇವ ರಾಜ್‌ಬೋಗ್ (ಹಗಲಿನ ದೇವ). ಮಿಸ್‌ಯೂಟ್ಸ್ ಚಂದ್ರದೇವಿ. ಸೂರ್ಯ ಚಂದ್ರ ಗಂಡ ಹೆಂಡತಿಯರು. ಸೂರ್ಯನು ಚಂದ್ರದೇವಿ ಯನ್ನು ಬೇಸಿಗೆಯ ಪ್ರಾರಂಭದಲ್ಲಿ ಮದುವೆಯಾಗಿ ಚಳಿಗಾಲ ದಲ್ಲಿ ಅವಳನ್ನು ಬಿಟ್ಟುಬಿಡುತ್ತಾನೆ. ವಸಂತಕಾಲದಲ್ಲಿ ಪುನಃ ಅವಳನ್ನು ಕೂಡಿಕೊಳ್ಳಲು ಬರುತ್ತಾನೆ. ತಾರಕೆಗಳು ಈ ಗಂಡ-ಹೆಂಡಿರ ಮಕ್ಕಳು. ಈ ಗಂಡ-ಹೆಂಡಿರಲ್ಲಿ ಪರಸ್ಪರರಲ್ಲಿ ವಿತುಷ್ಟಿಯಾಗಿ ಅವರ ಜಗಳಾಡುವಾಗ ಅದರಿಂದ ಭೂಕಂಪ ಗಳಾಗುತ್ತವೆ. (ಕೆಲವು ಪುರಾಣ ಕಥೆಗಳಲ್ಲಿ ಚಂದ್ರ ಗಂಡ: ಸೂರ್ಯ ಹೆಂಡತಿ. ಚೀನೀಯರ ಆಕಾಶದೇವತೆ ಚಂದ್ರ (ಯುಯ್‌ಟಿ) ಸೃಷ್ಟಿಕರ್ತ. ಈತನ ಪೆಂಡತಿ ಚ್ಯಾಂಗೋ (ಹೆಂಗೋ) ಅವಳು ಜಗತ್ತನ್ನು ಸುಡುವ ಒಂಬತ್ತು ಸೂರ್ಯ ರನ್ನು ಬಾಣ ಹೊಡೆದು ಕೆಡವಿ ಜಗತ್ತನ್ನು ಕಾಪಾಡಿದ್ದಳು.)

ಶಬ್ದಗಳ ಅರ್ಥಗಳು ಪುರಾಣಕಥೆಗಳ ರಹಸ್ಯವನ್ನು ಸ್ಪಷ್ಟ ಮಾಡುವುದರ ಉದಾಹರಣೆ ಸೆಲೆನಿ–ಎಂಡಿಮಿಯನ್ ಎಂಬ ಗ್ರೀಕ್ ಪುರಾಣಕಥೆ.

ಎಲಿಸ್ ಪಟ್ಟಣದ ಅರಸು ಎಥರಿಯೋಸ್‌ನ ಮಗ ಎಂಡಿಮಿಯನ್. ಆದರೆ ಈ ಕಥೆ ಆ ರಾಜ್ಯಕ್ಕೆ ದೂರವಾದ ಲೆಟ್‌ಮೋಸ್ (Letmos) ಪರ್ವತದ ಗುಹೆಯ ಭಾಗದಲ್ಲಿ ಜರುಗುತ್ತದೆ. ಎಂಡಿಮಿಯನ್‌ನು ಗುಹೆಯಲ್ಲಿ ನಿದ್ರಿಸಿದ್ದುದನ್ನು ನೋಡಿ ಸೆಲೆನಿ ಎಂಬ ಸುಂದರಿ ಅವನಲ್ಲಿ ಮೋಹಗೊಳ್ಳುತ್ತಾಳೆ. ಎಂಡಿಮಿಯನ್ ಎಂಬ ಶಬ್ದದ ಅರ್ಥ ಅಸ್ತಂಗತನಾಗುತ್ತಿರುವ ಸೂರ್ಯ ಎಂದಿದೆ. ಸೆಲೆನಿ ಅಂದರೆ ಚಂದ್ರ. ಸೂರ್ಯನು ಮುಳುಗುತ್ತಿದ್ದಂತೆ ಚಂದ್ರೋದಯವಾಗುವ ಸುಂದರ ದೃಶ್ಯವನ್ನು ಈ ಕಥೆ ಹೇಳುತ್ತದೆ. ಆಮೇಲೆ ಸೂರ್ಯನನ್ನು ಪ್ರೇಮಿಸುವ ಚಂದ್ರನ ಕಲ್ಪನೆ ಕ್ರಮೇಣ ಮರೆಯಾಗಿ ಅದು ಎಂಡಿಮಿಯನ್ ಎಂಬ ಸುಂದರ ರಾಜಕುಮಾರ ಹಾಗೂ ಸೆಲೆನಿ ಎಂಬ ರಾಜಕುಮಾರಿಯ ಕಥೆಯಾಗಿ ಪರಿಣಮಿಸುತ್ತದೆ.

ಸಾವಿತ್ರಿ-ಸತ್ಯವಾನರ ಕಥೆಯಲ್ಲಿ ಸಾವಿತ್ರಿ ಸವಿತೃವಿಗೆ ಸಂಬಂಧಿಸಿದ ಹೆಸರು. ಸಾವಿತ್ರಿ ಸೂರ್ಯನ ಬೆಳಕಾಗಿರಬಹುದು. ಯಮನು ಕತ್ತಲೆಯ ಸಂಕೇತವಾದರೆ ಸತ್ಯವಾನನು ಮುಳುಗಿದ ಸೂರ್ಯನಾಗುತ್ತಾನೆ.

ಫಿನಿಶಿಯನರ ಅಸ್ಟಾರ್ಟೆಯೆಂಬ ದೇವತೆಯೇ ಗ್ರೀಕರ ಅಫ್ರೊಡೈಟ್ ಎಂಬ ಸೌಂದರ್ಯದೇವತೆಯಾಗಿರಬೇಕೆಂದು

ಎಣಿಸಲಾಗುತ್ತದೆ. ಅವಳು ಲ್ಯಾಟಿನ್ ಪುರಾಣದಲ್ಲಿ ವೀನಸ್ ಆಗಿದ್ದಾಳೆ. ಸುಮೇರಿಯನ್ನರ ಇಸ್ಟಾರ್ ಎಂಬ ದೇವತೆಯೂ ಅವಳಂತೆ ಶುಕ್ರಗ್ರಹದ ದೇವತೆಯೆಂದು ನಂಬಿಕೆಯಿದೆ. ಆದರೆ ಗ್ರೀಕ ಭಾಷೆಯಲ್ಲಿ ಅಫ್ರೊಡ್ಯಾಟಿಯೆಂದರೆ "ನೊರೆ" ಎಂದರ್ಥವಿದೆ. ಈ ಅರ್ಥವು ಅವಳು ಸಮುದ್ರದಿಂದ ಮುತ್ತಿನ ಸಿಂಪಿನಲ್ಲಿ ಹುಟ್ಟಿ ಮೇಲೇರಿ ಬಂದಳು ಎಂಬ ಪುರಾಣಕಥೆಗೆ ಕಾರಣವಾಗಿರಬೇಕು. ಗ್ರೀಕರ ಕೆಫಲೊಸ್ ಮತ್ತು ಪ್ರೋಕ್ರಿಸ್ ಕಥೆಯ ಕೆಫಲೊಸ್ ಸೂರ್ಯ. ಪ್ರೊಕ್ರಿಸ್ ಇಬ್ಬನಿ. ಪುರಾಣ-ಕಲ್ಪನೆ ಕೆಫಲೊಸ್‌ನ ನಲ್ಲೆ ಅವಳಿಂದು ಬಲಿಯನ್ನು ನೆಯ್ದಿತು. ಸೂರ್ಯ ಇಬ್ಬನಿಯ ಮೇಲೆ ತನ್ನ ಕಿರಣಗಳನ್ನು ಸೂಸಿ ಪ್ರೇಮಗೈಯುತ್ತಾನೆ. ಆದರೆ ಈ ಪ್ರೇಮ ಕ್ಷಣಿಕವಾದದ್ದು. ಸೂರ್ಯ ಕಿರಣಗಳೇ ಇಬ್ಬನಿಯ ಪ್ರಾಣ ಹೀರುತ್ತವೆ. ಅಡವಿಯಲ್ಲಿ ತನ್ನ ನಲ್ಲೆಯು ಮೃಗವೆಂದು ಭ್ರಮಿಸಿ ತನ್ನ ಎಂದೂ ಗುರಿತಪ್ಪದ ಮಾಟದ (ಜಿನ್ನದ) ಭಲ್ಲೆಯಿಂದ ಅವಳನ್ನು ಕೆಫಲೊಸ್ ಕೊಂದ ವಿಷಾದಾಂತವಾದ ಸುಂದರ ಪುರಾಣಕಥೆಯಾಗುತ್ತದೆ ಇದು.

ನಾರ್ಸಿಸಸ್ ಒಂದು ಬಗೆಯ ಸುಂದರವಾದ ನೀಲಿ ಹೂ. ನೀರಿನ ಮೇಲೆ ಪ್ರತಿಬಿಂಬವನ್ನು ಥಳಕಿಸುತ್ತ, ತನ್ನ ಅಂದಕ್ಕೆ ತಾನೇ ತಲೆದೂಗಿ ನಲಿವ ಹಾಗೆ ಬಾಕುವ ಈ ಹೂಗಳ ಗುಚ್ಛವನ್ನು ನೋಡಿ ಓರ್ವ ಗ್ರೀಕ ಕಥನಕವಿ ಈ ರೀತಿ ಕಥೆಯನ್ನು ಹೆಣೆದನು. ನೀಲಿ ಜಲದೇವತೆ ಲೈರಿಯೋಪಿ (Leiriope) ಯಲ್ಲಿ ಜಲದೇವತೆ ಸೆಫಿಸಸ್‌ನಿಂದ ಜನಿಸಿದ ನಾರ್ಸಿಸಸ್ ಬಹು

ಮೋಹಕರೂಪಿನ ಚೆಲುವ ಸ್ತ್ರೀಪುರುಷರೆಲ್ಲರೂ ಅವನ ರೂಪಿಗೆ ಮರುಳಾಗುತ್ತಿದ್ದರು. ಕಣಿಹೇಳುವ ಅಂಧ ಟ್ಯಾರೆಸಿಯಸ್ "ನಾರ್ಸಿಸಸ್ ತನ್ನನ್ನು ತಾನೇ ಅರಿಯದಿದ್ದರೆ ಮುಪ್ಪಿನ ಮುದುಕನಾಗುವವರೆಗೂ ಬದುಕಿರುತ್ತಾನೆ" ಎಂದು ನುಡಿದಿದ್ದನು.

ವನದೇವತೆ ಇಕೋ (ಪ್ರತಿಧ್ವನಿ) ಎಂಬ ಸುಂದರಿ ಜ್ಯೂಸ್‌ದೇವನ ಪ್ರಣಯಗಳ ಕುರಿತು ಹೀರಾದೇವಿಗೆ ಚಾಡಿ ಹೇಳಿದ್ದರಿಂದ ಇತರರ ಮಾತುಗಳ ಪ್ರತಿಧ್ವನಿಮಾಡುವುದಲ್ಲದೆ ತನ್ನ ಅಭಿಪ್ರಾಯವನ್ನು ವ್ಯಕ್ತಮಾಡುವ ಮಾತಿನ ಶಕ್ತಿಯನ್ನೇ ಕಳೆದುಕೊಂಡಿದ್ದಳು. ಅವಳು ಅಡವಿಯಲ್ಲಿ ನಾರ್ಸಿಸಸ್‌ನನ್ನು ಕಂಡು ಮೋಹಿಸಿ, ಅವನ ಹಿಂದೆ ಹೋದಳು. ಅವನ ಮಾತುಗಳನ್ನೇ ಪ್ರತಿಧ್ವನಿಸುತ್ತಿದ್ದಳು. 'ನಾವು ಜತೆಯಾಗೋಣ' ಎಂದು ಕೊನೆಗೆ ಅವನೆಂದಾಗ ಹಾಗೇ ಹೇಳಿ ಅವನನ್ನಾಲಿಂಗಿಸಲು ಓಡಿಬಂದಳು. ನಾರ್ಸಿಸಸ್ ಅಲ್ಲಿಂದ ಕಾಲ್ದೆಗೆದನು.

ನೀರಡಿಸಿದ ನಾರ್ಸಿಸಸ್ ಕೊಳವೊಂದರ ತಿಳಿನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡುತ್ತ ಮೋಹದಲ್ಲಿ ಲೀನನಾದನು. ತನ್ನ ನೆರಳೇ ಎಂದು ತಿಳಿದರೂ ತನ್ನ ರೂಪಿಗೆ ತಾನೇ ಮರುಳಾದ ಅವನು ಅದನ್ನೇ ನೋಡುತ್ತ ನೋಡುತ್ತ ಕೊನೆಗೊಮ್ಮೆ ತನ್ನ ಎದೆಗೆ ಕಠಾರಿಯಿಂದ ಇರಿದುಕೊಂಡು ಪ್ರಾಣ ನೀಗಿದನು.

'ಇಕೋ' (Echo) ಪ್ರತಿಧ್ವನಿ. ಗುಹಾಧ್ವನಿ, ಅದನ್ನು ಪುರಾಣಕಥೆಗಾರ ಮಾನವೀಯ ಅಂತಃಕರಣದ ಚಿತ್ರಕಥೆ

ಯನ್ನಾಗಿ ಇಲ್ಲಿ ನಾರ್ಸಿಸಸ್ ಕಥೆಯೊಂದಿಗೆ ಜೋಡಿಸಿದ್ದಾನೆ. ಈಲಿಯಡ್ ಒಡಿಸ್ಸಿ, ರಾಮಾಯಣ, ಮಹಾಭಾರತ, ಮತ್ತಿತರ ಪುರಾಣ ಕಾವ್ಯ ಕಥೆಗಳೆಲ್ಲ ಸೂರ್ಯಪುರಾಣಗಳೇ ಎನ್ನುವವರುಂಟು. ಚಿನ್ನದ ಖಡ್ಗವನ್ನು ಝಳಪಿಸಿ ಯುದ್ಧ ಮಾಡುವುದು ಚಿನ್ನದ ಬಣ್ಣವುಳ್ಳ ಬಾಣಪ್ರಯೋಗ ಮಾಡಿದುದು. ಚಿನ್ನದ ಕೂದಲಿನ ಗಂಡು–ಹೆಣ್ಣುಗಳು, ಚಿನ್ನದ ಹೊಳೆಯುವ ಅರಮನೆಗಳು, ಚಿನ್ನದ ಬಣ್ಣದ ನಿಲುವಂಗಿ ಹಾಕಿಕೊಂಡವರ ಕಥೆಗಳು ಎಲ್ಲಿದ್ದರೂ ಅಲ್ಲಿ ಸೂರ್ಯಕಿರಣಗಳ ಸಂಕೇತವೆಂದು ಸೂರ್ಯ ಪುರಾಣ ಎನ್ನುವವರುಂಟು. ಈ ತತ್ವದ ಪ್ರಕಾರ ಈಲಿಯಡ್ ಮಹಾಕಾವ್ಯದಲ್ಲಿ ಹೆಕ್ಟರನು ಪೆಟ್ರೊಕ್ಲಸನನ್ನು ಬಾಣಪ್ರಯೋಗದಿಂದ ವಧಿಸಿದುದು ಸೂರ್ಯನ ಸಾಂಕೇತಿಕ ಮರಣವನ್ನು ಸೂಚಿಸುತ್ತದೆ. ವ್ರೊಲ್ಸಂಗ್ ಸಾಗಾ (ಸಾಗಾ ಅಂದರೆ ಗದ್ಯ ಪುರಾಣ) ದ ಸಿಗುರ್ಡನ ಖಡ್ಗ ಸೂರ್ಯನ ಕಿರಣಗಳನ್ನು ಸಂಕೇತಿಸುತ್ತದೆ.

ಹಾಗೆಯೇ ಪರ್ಸಿಯಸ್ ಎಂಬ ಗ್ರೀಕವೀರನು ಮೆಡ್ಯೂಸಾಳನ್ನು ಕೊಂದ ಸಾಹಸಕಥೆ ಸೂರ್ಯನು ಸುಂದರವಾದ ರಾತ್ರಿಯನ್ನು ಕೊಂದ ಪುರಾಣಕಥೆಯಾಗುತ್ತದೆ. ಈಡಿಪಸ್, ಟ್ರೋಜನ್‌ವೀರ ಪ್ಯಾರಿಸ್, ಇರಾಣದ ರಾಜ ಸ್ವಾರಸ್ ಇವರೆಲ್ಲ ಸೂರ್ಯನ ಪ್ರತಿನಿಧಿಗಳೇ ಎನ್ನುವವರುಂಟು.

ಅನೇಕ ಜಾನಪದ ಕಥೆಗಳು ಪುರಾಣಗಳಿಂದ ಟಿಸಿಲೊಡೆದಿವೆ. ಪ್ರಸಿದ್ಧವಾದ ಸಿಂಡರೆಲ್ಲಾ ಕಥೆಯ ಸಿಂಡರೆಲ್ಲಾ ರಾಜ

ಕುಮಾರಿ ವಿಧಿಕ್ರಮದಲ್ಲಿ ಬರುವ ಬೇಸಿಗೆಯ ರಾಣಿಯೆಂದು ವಿದ್ವಾಂಸರು (ಲೂಯಿಸ್‌ಸ್ಪೆನ್ಸ್) ನಿರ್ಣಯಿಸಿದ್ದಾರೆ. ರಾಬಿನ್ ಹುಡ್ (ವುಡ್) ಎಂಬ ದರೋಡೆಗಾರನು ಅಡವಿಯಲ್ಲಿದ್ದು-ಕೊಂಡು ಶ್ರೀಮಂತರನ್ನು ಸುಲಿದು ಬಡವರಿಗೆ ಸಹಾಯ ಮಾಡುವವನೆಂದು ಕಥೆಯಲ್ಲಿ ಪ್ರಸಿದ್ಧನು. ಆ ಹೆಸರಿನ ದರೋಡೆಗಾರನಿರಲಿಲ್ಲ— ಆದರೆ ಅಡವಿಯಲ್ಲಿ ಮೇ ದಿನಗಳ ಉತ್ಸವಗಳಲ್ಲಿನ ವನಸ್ಪತಿ ಪೂಜೆಯ ಐತಿಹಾಸಿಕ ಅವಶೇಷಗಳ ಮೂಲಕ ಆ ವಿಧಿಕ್ರಮಗಳಿಂದ ರಾಬಿನ್‌ಹುಡ್‌ನ ಕಥೆಯು ವಿಕಾಸವಾಗಿದೆಯೆಂದು ಸಿದ್ಧವಾಗಿದೆ. ಆದರೆ ಎಲ್ಲ ಪುರಾಣ ಕಥೆಗಳು ವಿಧಿಕ್ರಮಗಳಿಂದಲೇ ಮೂಡಿದವೆಂದು ಹೇಳುವುದು ಸರಿಯಲ್ಲ. ಹಾಗೆಯೇ ಎಲ್ಲ ಜಾನಪದ ಕಥೆಗಳೂ ಸೂರ್ಯ ಪುರಾಣವೆನ್ನುವುದೂ ತಪ್ಪಾಗುತ್ತದೆ. ಕಪ್ಪೆರಾಜನ ಕಥೆಯು ಸೂರ್ಯನ ಕಥೆಯೇ ಎಂದು ಮೆಕ್ಸ್‌ಮುಲರ್ ಬರೆಯುತ್ತಾರೆ. ಕಪ್ಪೆಯು ರಾಜಕುಮಾರಿಯೊಡನೆ ತನ್ನನ್ನು ಮದುವೆಯಾಗು ಎನ್ನುವುದೂ, ಮದುವೆಯಾದಮೇಲೆ ಮಾಟದಿಂದ ಬಂದಿದ್ದ ಕಪ್ಪೆಯ ರೂಪಿನ ಉಡುಪು ಕಳಚಿ ಅದು ರಾಜಕುಮಾರ ನಾಗುವುದೂ ಸೂರ್ಯನ ಕಥೆಯೆನ್ನಲು ಅವರು ಹೀಗೆ ಕಾರಣ ಕೊಟ್ಟಿದ್ದಾರೆ. ಸೂರ್ಯನಿಗೆ ಕಪ್ಪೆ ಎಂಬ ಹೆಸರು ಋಗ್ವೇದ ದಲ್ಲಿದೆ. ಪ್ರಾಚೀನರು ಸೂರ್ಯನನ್ನು ಬಹಳ ಹೆಸರುಗಳಿಂದ ಕರೆಯುತ್ತಿದ್ದರು. ಚಿನ್ನದ ಹಂಸ, ಸಿಂಹ, ತೋಳ ಇತ್ಯಾದಿ. ಸೂರ್ಯೋದಯ ಅಥವಾ ಸೂರ್ಯಾಸ್ತದಲ್ಲಿ ನೀರಿನ ಮೇಲೆ ಸೂರ್ಯಬಿಂಬವು ಕುಳಿತಂತೆ ಕಾಣುವ ಸೂರ್ಯನಿಗೆ ಕಪ್ಪೆ

ಯೆಂದು ಹೆಸರಿಟ್ಟಿದ್ದರು. ಇದನ್ನೊಪ್ಪಿದರೂ ಅವರು ಪಂಜಾಬಿನ ಭೇಕಿಯ ಕಥೆಯೂ ಸೂರ್ಯನ ಕಥೆಯೇ ಎಂಬುದನ್ನೊಪ್ಪು-ವುದು ಕಷ್ಟ.

ಭೇಕಿ ಹೆಣ್ಣುಕಪ್ಪೆ. (ಸಂಸ್ಕೃತದಲ್ಲಿ ಕಪ್ಪೆಗೆ ಭೇಕ ಎನ್ನುತ್ತಾರೆ.) ಭೇಕಿ ಮೊದಲು ಸುಂದರ ಹುಡುಗಿಯಾಗಿದ್ದಳು. ಅವಳು ಒಂದು ಬಾವಿಯ ಬಳಿ ಕುಳಿತಾಗ ರಾಜನು ಅವಳನ್ನು ನೋಡಿ ತನ್ನ ಮಡದಿಯಾಗುವಂತೆ ಕೇಳಿದನು. ಅವಳು ತನಗೆ ನೀರಿನ ಬಿಂದುವನ್ನು ತೋರಿಸಬಾರದೆಂಬ ಅಟಿ(ಕರಾರು)ಯಿಂದ ಅವನ ಹೆಂಡತಿಯಾಗಲು ಒಪ್ಪಿದಳು. ಒಂದು ದಿನ ಬಳಲಿದ್ದ ಅವಳು ನೀರನ್ನು ಕೊಡಬೇಕೆಂದು ರಾಜನೊಡನೆ ಹೇಳಿದಳು. ಅವನು ಕೊಟ್ಟ ಮಾತನ್ನು ಮರೆತು ನೀರನ್ನು ತಂದಾಗ ಅವಳು ಮರೆಯಾದಳು. ಸೂರ್ಯನು ನೀರಿನ ಸಮೀಪ ಬಂದಾಗ ಮುಳುಗುತ್ತಾನೆ ಎಂಬ ಸಂಕೇತ ಈ ಕಥೆಯಲ್ಲಿದೆ. ಸೂರ್ಯನು ಹೆಣ್ಣೆಂದು ಕಲ್ಪಿಸಿ ಈ ಕಥೆಯನ್ನು ಹೆಣೆದಿರಬೇಕು ಎಂದು ಮೆಕ್ಸ ಮುಲರ್ ಬರೆಯುತ್ತಾರೆ. ಆದರೆ ಸಂಸ್ಕೃತದಲ್ಲಿ ಸೂರ್ಯನು ಹೆಣ್ಣೆಂದು ತಿಳಿದಿಲ್ಲ, ಜನರಲ್ಲಿ ಹಾಗೆ ಕಲ್ಪನೆಯೂ ಇಲ್ಲ. ಕಪ್ಪೆ ರಾಜಕುಮಾರನ ಕಥೆ ಇಂಥ ಕಥೆಗೆ ಪ್ರೇರಕವಾಗಿದ್ದಿರಬಹು-ದಾದರೂ ಕಲ್ಪನೆಯ ಕಥೆಗಳಲ್ಲಿ ಪ್ರತಿಯೊಂದೂ ಸೂರ್ಯ ಅಥವಾ ನಿಸರ್ಗದ ಕಥೆಯೇ ಆಗಿರಬೇಕಿಲ್ಲ. ('ಆರ್ಯನ್ ಪುರಾಣ' ಎಂಬ ಗ್ರಂಥದಲ್ಲಿ ಜೆ.ಡಬ್ಲ್ಯು. ಕಾಕ್ಸರು ಗಂಡಾಂತರ ದಲ್ಲಿ ಸಿಲುಕಿದ ರಾಜಕುಮಾರಿಯನ್ನು ಸಾಹಸದಿಂದ ಬಿಡಿಸಿದ ಕಿರಿಯ ರಾಜಕುಮಾರನ ಕಥೆಯಲ್ಲಿ ಪ್ರಾತಃಕಾಲವು ಸೂರ್ಯ

ನನ್ನು ಅರಿಸಿ ಪಡೆಯುವದೆಂದು ವಿವರಿಸುವದಕ್ಕೂ ಇದೇ ಮಾತನ್ನು ಹೇಳಬಹುದು.)

ಡಬ್ಲಿನ್ ವಿಶ್ವವಿದ್ಯಾಲಯದವರು ಪ್ರಕಟಿಸಿದ 'ಕೊಟ್ಟ-ಬೋಸ' ಎಂಬ ಪುಸ್ತಕದಲ್ಲಿ ಮೆಕ್ಸಮುಲ್ಲರರ ವಾದಗಳನ್ನು ಅವರಿಗೇ ಅನ್ವಯಿಸಿ ಮೆಕ್ಸಮುಲ್ಲರ್ ಮಹಾಶಯರು ನಿಜವ್ಯಕ್ತಿಗಳಾಗಿರದೆ ಸೂರ್ಯಪುರಾಣದ ಕಥೆಯೊಂದರ ನಾಯಕರಾಗಿರಬೇಕೆಂದು ಸಿದ್ಧಮಾಡಲು ಹವಣಿಸಿದುದು ಸ್ವಾರಸ್ಯವಾಗಿದೆ!

## ೪. ಇತಿಹಾಸದಿಂದ ಪುರಾಣ

ಇತಿಹಾಸ ವಿಷಯಗಳು ಎಷ್ಟೋ ಪುರಾಣ ಕಥೆಗಳ ಉಗಮಕ್ಕೆ ಕಾರಣವಾಗಿವೆಯೆಂಬ ಮಾತು ಸಮರ್ಪಕವಾಗಿದೆ. ಪರಂಪರೆಯಿಂದ ನಡೆದ ಸಂಗತಿಗಳೆಂದು ಹೇಳುತ್ತಬಂದ ಕಥೆಗಳು ಕ್ರಮೇಣ ಪುರಾಣ ಅಥವಾ ಆಖ್ಯಾಯಿಕೆ (Legend)ಗಳ ಸ್ವರೂಪವನ್ನು ಪಡೆಯುತ್ತವೆ.

ಆದರೆ ಕೆಲವು ಸಲ ಆಖ್ಯಾಯಿಕೆಗಳೆಂದು ತೋರುವ ಕಥೆಗಳು ಕಾಲ್ಪನಿಕ ಕಥೆಗಳಾಗಿರುವುದೂ ಉಂಟು. ಕೆಲವು ರಾಜ ಮನೆತನಗಳವರು ಪುರಾಣವ್ಯಕ್ತಿಗಳೊಡನೆ ಸಂಬಂಧವನ್ನು ತೋರಿಸಿಕೊಳ್ಳುವುದಕ್ಕಾಗಿ ಅನೇಕ ಕಾಲ್ಪನಿಕ ಕಥೆಗಳನ್ನು ಹೆಣೆಯುತ್ತಾರೆ. ಗ್ರೀಸಿನ ಏಜಿಯದ ಮಿರ್ಮಿಡೋನ್ ಪಂಗಡದವರ ಕುರಿತ ಆಖ್ಯಾಯಿಕೆಯಲ್ಲಿ ಅವರ ವಂಶದ ಉಗಮದ ಕುರಿತಾದ

ಈ ಕಥೆಯಿದೆ. ಏಜಿಯದ ನಡುಗಡ್ಡೆಯಲ್ಲಿ ಸಾಂಕ್ರಾಮಿಕ ಪಿಡುಗುಗಳ ಮೂಲಕ ಜನಸಂಖ್ಯೆ ಬಹಳ ಕಡಿಮೆಯಾಗಿತ್ತು. ಏಜಿಯಸ್ ರಾಜನು ಜನಸಂಖ್ಯೆಯನ್ನು ಹೆಚ್ಚಿಸಬೇಕೆಂದು ಜ್ಯೂಸ್ ದೇವನನ್ನು ಪ್ರಾರ್ಥಿಸಿದನು. ದೇವನು ಪ್ರಸನ್ನನಾಗಿ ಇರಿವೆಗಳನ್ನು ಮನುಷ್ಯರನ್ನಾಗಿ ಮಾಡಿದನು. ಜನಸಂಖ್ಯೆಯು ಇರಿವೆಗಳಂತೆ ಹೆಚ್ಚಾಗುತ್ತಿರುವ ಈ ಕಾಲದಲ್ಲಿ ಇರಿವೆಗಳೇ ಮನುಷ್ಯರಾದರೋ ಎಂದು ಭಾಸವಾಗಬಹುದು! ಆದರೆ ಈ ಮಿರ್ಮಿಡೋನ್ ಎಂಬ ಶಬ್ದದ ಅರ್ಥ 'ಇರಿವೆ' ಎಂದು ತಿಳಿದರೆ ಈ ಶಬ್ದವು ಈ ಆಖ್ಯಾಯಿಕೆಯ ಮಿಥ್ (myth) ರೂಪಕ್ಕೆ ಕಾರಣವಾದುದು ತಿಳಿಯುತ್ತದೆ. ದೂರದಲ್ಲಿನ ನಾವಿಕರಿಗೆ ಈ ದ್ವೀಪದಲ್ಲಿ ತಿರುಗಾಡುವ ಬಹಳ ಜನರ ಗುಂಪು ಇರಿವೆಗಳು ಹರಿಯುವಂತೆ ಕಂಡು ಅವರು ಈ ಜನರಿಗೆ ಮೊದಲು ಇರಿವೆಗಳು (ಮಿರ್ಮಿಡೋನ್ಸ) ಎಂದು ಕರೆದಿರ ಬಹುದು. ಡಬ್ಲ್ಯೂ. ಆರ್. ಹೆಲಿಡೇಯವರು ಇನ್ನೊಂದು ಕಥೆಯ ಉಗಮದ ಕುರಿತು ಹೀಗೆ ಬರೆದಿದ್ದಾರೆ. "ಬಾಲಿ ಮೋರ್ನಿಯ ಬರೆದ ಆಯರ್ಲಂಡದ ಇತಿಹಾಸದಲ್ಲಿ ಹೀಗಿದೆ: ಒಬ್ಬ ಆಯರಿಶ್ ರಾಜನು ವೈರಿಗಳ ಸಂಖ್ಯೆಯು ತನ್ನ ಸೈನ್ಯದ ಸಂಖ್ಯೆಗಿಂತಲೂ ಹೆಚ್ಚಾದಾಗ ಸಂತ ಗೊಬ್ನೈಟನಿಗೆ ಪ್ರಾರ್ಥನೆ ಸಲ್ಲಿಸಿದನು. ಆ ಸಂತನು ಸಮೀಪದಲ್ಲಿದ್ದ ಜೇನುಹುತ್ತಿನಲ್ಲಿದ್ದ ನೊಣಗಳನ್ನೆಲ್ಲ ಸೈನಿಕರನ್ನಾಗಿ ಮಾಡಿದನು. ಯುದ್ಧದ ಅನಂತರ ಆ ಜೇನುಹುತ್ತು ಹಿತ್ತಾಳಿಯಾಗಿ ಮಾರ್ಪಟ್ಟು ಒಂದು ಶಿರಸ್ತ್ರಾಣದ ರೂಪವನ್ನು ಪಡೆಯಿತು. ಈ ಕಥೆ ಹೀಗೆ ರೂಪ-

ಗೊಂಡಿರಬೇಕು; ಆ ಊರಿನ ಒಂದು ಮನೆತನದವರಲ್ಲಿದ್ದ ಒಂದು ಶಿರಸ್ತ್ರಾಣವು ಆಕಾಶದಲ್ಲಿ ಜೇನುಹುತ್ತಿನ ಹಾಗೆ ಕಾಣುತ್ತಿತ್ತು. ೧೯ನೆಯ ಶತಮಾನದಲ್ಲಿಯೂ ಅದನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ಅದರಿಂದ ಸುರಿಸಿದ ನೀರನ್ನು ಕುಡಿದರೆ ದೇವಲೋಕಕ್ಕೆ ಹೋಗಲು ಸಹಾಯವಾಗುವುದೆಂದು ತಿಳಿಯುತ್ತಿದ್ದರು. ಈ ಮಾಂತ್ರಿಕ ಶಕ್ತಿಯುಳ್ಳದ್ದೆಂದು ಪ್ರಸಿದ್ಧವಾದ ಥಾಲಿನ ಮಹಿಮೆಯನ್ನು ವಿವರಿಸಲು ಈ ಕಥೆಯು ಕಲ್ಪಿತವಾಯಿತೆಂದು ತಿಳಿಯುತ್ತದೆ.

ತಾವು ಸೂರ್ಯವಂಶದವರು, ತಾವು ಚಂದ್ರವಂಶದವರು ಎಂದು ಕರೆದುಕೊಳ್ಳುವ ಸಂಪ್ರದಾಯ ಭಾರತದ ಪುರಾಣ ಕಾಲದ ಹಾಗೂ ಇತಿಹಾಸಕಾಲದ ರಾಜರಲ್ಲಿದ್ದುದು ಸುಪ್ರಸಿದ್ಧವಾಗಿದೆ. ತಮ್ಮ ಪ್ರತಿಷ್ಠೆಯನ್ನು ಹೆಚ್ಚು ಮಾಡಿಕೊಳ್ಳುವ ಪ್ರಯತ್ನವಿಲ್ಲಿ ಕಾಣುತ್ತದೆ. ಕೌರವರಾಜರಲ್ಲಿ ಹಿಂದೆ ಚಂದ್ರನೆಂಬ ಹೆಸರಿನ ರಾಜನಿದ್ದಿರಬಹುದು. ಅಯೋಧ್ಯೆಯ ರಾಮನ ವಂಶದ ಮೂಲಪುರುಷ ಸೂರ್ಯನೆಂಬ ಹೆಸರಿನವನಿದ್ದಿರಬಹುದು.

ಪುರಾಣ ಕಥೆಗಳಲ್ಲಿ ಪ್ರಸಿದ್ಧನಾದ ಮೊದಲನೆ ಕ್ರೀಟಿನ ಮಿನೋಸ್ ರಾಜನು ಐತಿಹಾಸಿಕ ವ್ಯಕ್ತಿ. ಅವನು ಶ್ರೇಷ್ಠ ನ್ಯಾಯ ನಿರ್ಣಯ ಪದ್ಧತಿಯನ್ನು ಆಚರಣೆಯಲ್ಲಿ ತಂದಿದ್ದನು. ಅವನು ಮಡಿದ ಮೇಲೆ ಸತ್ತವರ ಲೋಕದಲ್ಲಿ ಅವನು ನ್ಯಾಯನಿರ್ಣಯಾಧಿಕಾರಿಯಾದನೆಂಬ ಪುರಾಣಕಲ್ಪನೆಯಾಯಿತು.

ಮುಟ್ಟಿದ್ದನ್ನೆಲ್ಲ ಚಿನ್ನಮಾಡಿದ ಮಿಡಾಸರಾಜನು ಮುಸ್ಕಿ ರಾಜ್ಯದ ಮಿಟಾ ಎಂಬ ರಾಜನೆಂದು ಗುರುತಿಸಿದ್ದಾರೆ. ಕ್ರಿ. ಪೂ. ಹದಿನೈದು ನೂರರ ಸುಮಾರಿಗೆ ಈತನು ಥ್ರೇಸದ ಪಶ್ಚಿಮ ಭಾಗವನ್ನು ಗೆದ್ದನು. ಅವನ ರಾಜವಂಶದ ಅಪಾರಸಂಪತ್ತನ್ನು ಸೂಚಿಸಲು ಮುಟ್ಟಿದ್ದೆಲ್ಲ ಚಿನ್ನ ಎಂಬ ಪುರಾಣಕಥೆ ರಚಿತ ವಾಯಿತು ಎಂದು ರಾಬರ್ಟ್‌ಗ್ರೇವ್ಸ್ ಬರೆದಿದ್ದಾರೆ. ಮಿಡಾಸನ ಕತ್ತೆಕಿವಿ ಇಜಿಪ್ತಿನ ಕತ್ತೆಕಿವಿಗಳುಳ್ಳ ದೇವಸೆಟ್ ಎಂಬವನ ದೇವಪ್ರಭುತ್ವ ಪ್ರಚಾರದಲ್ಲಿದ್ದ ಕಾಲದ ನೆನಪನ್ನುಳಿಸಿಕೊಂಡುದು ಎಂದೂ ಅವರು ಬರೆದಿದ್ದಾರೆ. ಆ ದೇವನ ಪೂಜಾರಿಗಳು ಉತ್ಸವದ ಕಾಲದಲ್ಲಿ ಕತ್ತೆ ಕಿವಿಗಳ ಆಕಾರಗಳನ್ನು ಧರಿಸುತ್ತಿದ್ದರು. (ಪಾನ್ ದೇವನಿಗೂ ಅಪ್ರೋಲೋ ದೇವನಿಗೂ ಯಾರು ಹೆಚ್ಚು ಮಧುರವಾದ ಸ್ವರವನ್ನು ನುಡಿಸುತ್ತಾರೆ ಎಂಬ ಕುರಿತು ಜಗಳ ವಾದಾಗ ಮಿಡಾಸನನ್ನು ಆ ಕುರಿತು ನಿರ್ಣಯ ಮಾಡಲು ಕರೆದರು. ಅವನು ಪಾನ್‌ದೇವನ ಸಂಗೀತವೇ ಹೆಚ್ಚು ಮಧುರ ಎಂದು ಹೇಳಿದುದರಿಂದ ಕೋಪಿಸಿಕೊಂಡ ಅಪ್ರೋಲೋ ಅವನ ಕಿವಿಗಳನ್ನು ಕತ್ತೆಕಿವಿಗಳನ್ನಾಗಿ ಮಾಡಿದನು. ಅವನ ಆಯು ಷ್ಕರ್ಮಕಾರನು (ಕೆಲಸಿ) ಕತ್ತೆಕಿವಿಗಳ ಗುಟ್ಟನ್ನು ಒಂದು ನದಿಯ ದಂಡೆಯಮೇಲಿನ ತಗ್ಗಿನಲ್ಲಿ ಉಸಿರಿದನು. ಅಲ್ಲಿ ಹುಲ್ಲುಗಣೆಕೆಗಳು ಹುಟ್ಟಿ ಮಿಡಾಸನಿಗೆ ಕತ್ತೆಕಿವಿಗಳಿವೆ ಎಂದು ಗಾಳಿ ಬಂದಾಗಲೆಲ್ಲ ಧ್ವನಿ ಮಾಡುತ್ತಿದ್ದವು ! ಎಂಬ ಪುರಾಣ ಕಥೆಯಿದೆ.)

ಕಾರ್ಲಾಯಿಲರು ಟ್ಯೂಟನ್‌ರ ಮುಖ್ಯ ದೇವನಾದ ಓಡಿನ್ (ಜರ್ಮನ್ ಭಾಷೆಯಲ್ಲಿ ವೋಟನ್–ಚಾಲಕಶಕ್ತಿ–ದೇವ ಎಂದು

ಅರ್ಥವಿದೆ.) ಐತಿಹಾಸಿಕ ವ್ಯಕ್ತಿಯಾಗಿದ್ದನು ಎಂದು ಬರೆದಿದ್ದಾರೆ. ಸ್ನೋರೋ ಎಂಬವನು ತನ್ನ ಹೆಂಸ್ರಿಂಗ್ಲ ಎಂಬ ಗ್ರಂಥದಲ್ಲಿ ಅವನು ಕಪ್ಪುಸಮುದ್ರದ ಪ್ರದೇಶದಲ್ಲಿ ರಾಜನಾಗಿದ್ದು ಹನ್ನೆರಡು ಜನ ಪ್ರಮುಖರೊಂದಿಗೆ ತನ್ನ ಏಶಿಯಾ ಜನಾಂಗವನ್ನು ಉತ್ತರ ಸ್ಕಾಂಡಿನೇವಿಯಾಕ್ಕೆ ತೆಗೆದುಕೊಂಡು ಹೋಗಿ ರಾಷ್ಟ್ರನಿರ್ಮಾಣ ಮಾಡಿದನು ಎಂದು ಬರೆದುದನ್ನು ಎತ್ತಿ ಹೇಳಿದ್ದಾರೆ. ಅವನು ರೂಸಿಕ್‌ಲಿಪಿಯನ್ನು ಶೋಧಿಸಿ ಅದರ ಸಹಾಯದಿಂದ ಮಾಟ ಮಾಡಿ ಜನರಿಗೆ ಸುಖಸೌಕರ್ಯ ಕಲ್ಪಿಸಿ ನಾಗರಿಕತೆಯನ್ನು ಬೆಳಸಿದನು. ಒಬ್ಬನು ಮಹಿಮಾವಂತನಾಗಿದ್ದು ಅವನು ಮಡಿದ ನಲವತ್ತು ವರ್ಷಗಳಲ್ಲಿ ಅವನನ್ನು ನೋಡಿದ್ದ ಜನರೂ ದಿವಂಗತರಾಗಲು, ಜನರ ದೃಷ್ಟಿಯಲ್ಲಿ ಅವನು ದೇವತ್ವವನ್ನು ಪಡೆಯುವುದು ಅಸಾಧ್ಯವಲ್ಲವೆಂದು ಕಾರ್ಲೈಯಿಲ್ ಹೇಳಿರುವುದು ನಿಜ. ರಾಮ-ಕೃಷ್ಣ ಮೊದಲಾದ ಮಹಾಪುರುಷರು ತಮ್ಮ ಜೀವಿತಕಾಲದಲ್ಲಿಯೇ ದೇವರ ಅವತಾರವೆಂದು ಗಣನೆ ಹೊಂದಿದ್ದರೆಂಬದನ್ನು ರಾಮಾಯಣ ಮಹಾಭಾರತ ಗ್ರಂಥಗಳಲ್ಲಿ ಕಾಣುತ್ತೇವೆ.

ಪೆಟ್ರು ಕರಮಾನ್ ಎಂಬ ವಿದ್ವಾಂಸನು ನಿಜವಾದ ಐತಿಹಾಸಿಕ ವಿಷಯವನ್ನು ಪುರಾಣಕಥೆಯನ್ನಾಗಿ ಹೇಗೆ ಪರಿವರ್ತಿಸುವರೆಂಬ ಕುರಿತು ಪ್ರಮಾಣಪೂರ್ವಕವಾದ ಅಭ್ಯಾಸವನ್ನು ಒದಗಿಸಿದ್ದಾನೆ.

ಟರ್ಕಿಯ ಮಲಕೋಶಪಾಶಾನು ಕ್ರಿ. ಶ. ೧೭೪೯ ರಲ್ಲಿ ಬಹಳ ತೀವ್ರವಾದ ಚಳಿಗಾಲದಲ್ಲಿ ಪೋಲಂಡದ ಮೇಲೆ ದಾಳಿ

ಮಾಡಿದ ಸಂಗತಿಯು ಪೋಲಂಡದ ಅನೇಕ ಐತಿಹಾಸಿಕ ದಾಖಲೆಗಳಲ್ಲಿದೆ. ಆಗ ಮೋಲ್ಡೆವಿಯಾ ಪ್ರಾಂತದಲ್ಲಿ ಇಡೀ ತುರ್ಕಿಸ್ಸೈನ್ಯವು ನಾಶವಾಯಿತು ಆದರೆ ಈ ಕಥೆಯನ್ನು ವೀರಗಾಥೆ (Ballad) ಯನ್ನಾಗಿ ಮಾಡಿ ಹಾಡಿದ ರುಮಾನಿಯಾದ ಲಾವಣಿಯಲ್ಲಿ ಆತನು ಪೋಲಂಡದ ಮೇಲೆ ದಾಳಿಮಾಡಿದ ಉಲ್ಲೇಖವೇ ಇಲ್ಲ. ಅದನ್ನು ಪೌರಾಣಿಕಯುದ್ಧವನ್ನಾಗಿ ಮಾರ್ಪಡಿಸಿಬಿಟ್ಟಿದ್ದಾನೆ ಲಾವಣಿಕಾರ. ಮಲಕೋಶಪಾಶಾನು ಚಳಿಗಾಲರಾಯನೊಡನೆ ಯುದ್ಧ ಮಾಡಿ ಮಡಿದ ವಿಷಯವೇ ಅಲ್ಲಿದೆ.

ಯುಗೋಸ್ಲಾವಿಯಾದ ಮಹಾಕವಿ ಮರ್ಕೋಕ್ರಲ್ಜೆವಿಕನು ೧೪ನೆಯ ಶತಕದಲ್ಲಿ ಬಾಳಿದವನು. ಧೀರನಾದ ಅವನು ಐತಿಹಾಸಿಕ ವ್ಯಕ್ತಿಯೆಂಬುದೂ ಕ್ರಿ.ಶ. ೧೩೯೪ರಲ್ಲಿ ಮಡಿದನೆಂಬುದೂ ಸಿದ್ಧವಾಗಿದೆ. ಆದರೆ ಜನರ ನೆನಪಿನಲ್ಲಿ ಅವನ ಜೀವನದ ನಿಜ ಸಂಗತಿಗಳು ಮಸುಳಿಸಿ ಹೋದ ಮೇಲೆ ಅವನ ಚರಿತ್ರೆಯನ್ನು ಪೌರಾಣಿಕ ಕಥೆಯ ಲಾವಣಿಯನ್ನಾಗಿಸಿ ಹಾಡಿದರು. ಆಗ ಅವನ ತಾಯಿ ವಿಲಾ (ಗಂಧರ್ವಸ್ತ್ರೀ) ಆದಳು. ಅವನು ತಂತ್ರದಿಂದ ಗಂಧರ್ವಕನ್ಯೆಯೊಬ್ಬಳನ್ನು ಮದುವೆಯಾಗುತ್ತಾನೆ. ಅವಳು ಹಾರಿಹೋಗಬಾರದೆಂದು ಅವಳ ರೆಕ್ಕೆಯುಡುಪನ್ನು ಅಡಗಿಸುತ್ತಾನೆ. ಮೂರು ಮುಖಗಳುಳ್ಳ ಘಟಸರ್ಪದೊಡನೆ ಹೋರಾಡಿ ಅದನ್ನು ಕೊಲ್ಲುತ್ತಾನೆ. ೧೩೯೪ ರಲ್ಲಿ ಮಡಿದ ಮಾರ್ಕೋ ಕ್ರಿ.ಶ. ೧೪೫೦ ರಲ್ಲಿ ತುರ್ಕರೊಡನೆ ಕಾದಾಡಿ ಪ್ರಸಿದ್ಧನಾದ ಜಾನ್ ಹಂಗಾಡಿಯ ಸಂಗಡಿಗನಾಗುತ್ತಾನೆ.

ಸುಮೇರಿಯನ್ ಮಹಾಕಾವ್ಯದ ನಾಯಕ ಗಿಲ್‌ಗಮೇಶ ಎಂಬ ವೀರನು ನಿಜವಾಗಿಯೂ ಮೂರುಸಹಸ್ರಮಾನಗಳ ಹಿಂದೆ ಸುಮೇರವ ಉರುಕ್ ಅಥವಾ ಇರೆಚ್ ನಗರದಲ್ಲಿ ಆಳಿದ ರಾಜನೆಂಬುದನ್ನು ಸಾಮಾನ್ಯವಾಗಿ ಒಪ್ಪುತ್ತಾರೆ. ಅವನ ಕುರಿತು ಬರೆದ ಮಹಾಕಾವ್ಯದಲ್ಲಿ ಅವನು ಪುರಾಣ ಪುರುಷನೆಂಬಂತೆ ಅವನ ಸಾಹಸಗಳು ವರ್ಣಿತವಾಗಿವೆ.

ಅವನು ಮಹಾಮಲ್ಲನೂ ಶೂರನೂ ಬೇಟೆಗಾರನೂ ಆಗಿದ್ದನು. ದೇಹದ ಎರಡು ಭಾಗಗಳ ದೇವನಾಗಿ ಒಂದು ಭಾಗದಲ್ಲಿ ಮಾನವನಾಗಿದ್ದನು. ಅತಿಕಾಮಿಯಾದ ಅವನು ನಗರದ ಹೆಣ್ಣುಗಳನ್ನು ಬಲಾತ್ಕಾರವಾಗಿ ವಶಮಾಡಿಕೊಳ್ಳುತ್ತಿದ್ದನು. ಹಿರಿಯರ ಪ್ರಾರ್ಥನೆಯನ್ನು ಲಾಲಿಸಿ ಅರುರು ಎಂಬ ದೇವಿ ಅವನ ಶಕ್ತಿಯನ್ನು ಮಣ್ಣುಗೂಡಿಸಲು ಬಲಶಾಲಿಯನ್ನು ನಿರ್ಮಿಸಿದಳು. ಅವನೇ ಕಾಡಿನ ಪಶುಪಾಲಕ–ಎಂಗಿಡು. ಅವನಿಗೆ ಎತ್ತಿನ ಕೋಡು, ಬಾಲ, ಕಾಲುಗಳಿದ್ದವು. ಗಿಲಗಮೇಶ ಅವನನ್ನು ಹಿಡಿದು ತರಲು ಸುಂದರಳಾದ ಅಪ್ಸರೆಯನ್ನು ಕಳಿಸಿದನು. ಅವಳನ್ನು ಮೋಹಿಸಿದ ಎಂಗಿಡು ನಗರಕ್ಕೆ ಬಂದನು. ಅಲ್ಲಿ ಹೆಂಗಸರು ಅವನನ್ನು ನಾಗರಿಕನನ್ನಾಗಿ ಮಾಡಿದರು

ವೇಶ್ಯೆಯ ಮನೆಗೆ ಹೋದ ಗಿಲಗಮೇಶನೊಡನೆ ಎಂಗಿಡು ಮಲ್ಲಯುದ್ಧ ಮಾಡಿದಾಗ ಇಬ್ಬರ ಬಲ ಸಮವಾಯಿತು. ಇಬ್ಬರೂ ಪ್ರಾಣಮಿತ್ರರಾದರು.

ಇಸ್ಟಾರ್ ದೇವತೆ ಎಂಗಿಡುವನ್ನು ತನ್ನ ಪ್ರಣಯ ಜಾಲದಲ್ಲಿ ಬೀಳಿಸಲು ನೋಡಿದಳು. ವಿಫಲಳಾದ ಅವಳು ಕ್ರೋಧಗೊಂಡು ತಂದೆ ಅನುದೇವನಿಗೆ ದೂರಿತ್ತಳು. ಅವನು ಎಂಗಿಡುವನ್ನು ಕೊಲ್ಲಲು ಕಳಿಸಿದ ಎತ್ತನ್ನು ಎಂಗಿಡು ಕತ್ತರಿಸಿ ಚೆಲ್ಲಿದನು. ಇಸ್ಟಾರಳ ಶಾಪದಿಂದ ಎಂಗಿಡು ಮಡಿದನು. ಗಿಲಗಮೇಶನು ದುಃಖದಿಂದ ಮಡಿದವರ ಲೋಕಕ್ಕೆ ಹೋಗಿ ಅಲ್ಲಿಯ ಅರಸನಾದ ತನ್ನ ವಂಶದ ಮೂಲಪುರುಷ ಉತ್ನಾಪಿಸ್ಟಿಂ ಎಂಬವನ ಹತ್ತಿರ ಹೋಗಿ ಅಮರತ್ವವನ್ನು ನೀಡುವ ಹಣ್ಣಿನ ಸಸಿಯನ್ನು ತರುತ್ತಾನೆ. ದಾರಿಯಲ್ಲಿ ಅದನ್ನು ದಂಡೆಯ ಮೇಲಿಟ್ಟು ಸ್ನಾನ ಮಾಡಲು ನೀರಿಗಿಳಿದಾಗ ಒಂದು ಹಾವು ಆ ಬಳ್ಳಿಯನ್ನು ಕಚ್ಚಿಕೊಂಡು ಪಾತಾಳಕ್ಕೆ ಹೋಯಿತು. ಸಾವನ್ನು ಗೆಲ್ಲುವ ಮಹತ್ವಾಕಾಂಕ್ಷೆಯಿಂದ ಹೆಣಗಿದ ಗಿಲಗಮೇಶನ ಐತಿಹಾಸಿಕ ಘಟನೆಗಳು ಈ ಕಥೆಯಿಂದ ತಿಳಿಯುವದಿಲ್ಲ.

ಗ್ರೀಸದ ಅಯೋಲ್ಕಸ್ಸಿನ ರಾಜನಾದ ಪೆಲಿಯೂಸನ ಹತ್ತದಮಾತಿನಲ್ಲಿ ಸಿಕ್ಕಿಕೊಂಡು ಚಿನ್ನದ ಉಣ್ಣೆಯನ್ನು ತರಲು ಹಡಗನ್ನು ಸಿದ್ಧಮಾಡಿಕೊಂಡು ಜೇಸನ್ ಎಂಬ ವೀರನು ಸಂಗಡಿಗರೊಡನೆ ಕಪ್ಪು ಸಮುದ್ರ ಪ್ರದೇಶಕ್ಕೆ ಪಯಣಿಸಿ ಸಾಹಸ ಮಾಡಿ ಉಣ್ಣೆಯನ್ನು ತರುವ ಕಥೆ ಬಹಳ ಪ್ರಸಿದ್ಧವಾಗಿದೆ.

ಜೇಸನ್ ಮಾಡಿದ ಅನೇಕ ಸಾಹಸಗಳಲ್ಲಿ ಮೂಗಿನಿಂದ ಬೆಂಕಿಯನ್ನುಗುಳುವ ಎರಡು ಭೀಕರವಾದ ಎತ್ತುಗಳನ್ನು ನಿಗ್ರಹಿಸಿ ಅವುಗಳನ್ನು ನೊಗಕ್ಕೆ ಬಿಗಿದು ಗದ್ದೆ ಉಳುವದು

ಒಂದು – ಆಮೇಲೆ ಮಾಂತ್ರಿಕ ಬೀಜಗಳನ್ನು ಬಿತ್ತಿ ಅವು ಗಳಿಂದ ನೆಲದಿಂದೆದ್ದು ಬರುವ ಸಾವಿರಾರು ಭಯಂಕರ ಸೈನಿಕರನ್ನು ಕೊಲ್ಲುವುದು ಇನ್ನೊಂದು. ಈಟಿಯಸ್ ರಾಜನ ಮಗಳು ಮೀಡಿಯಾ ಜೇಸನ್ನನನ್ನು ಮೋಹಿಸಿ ತನ್ನ ಮಾಂತ್ರಿಕ ಶಕ್ತಿಯ ಸಹಾಯವನ್ನು ಕೊಟ್ಟು ಈ ಸಾಹಸ-ಗಳಲ್ಲಿ ಅವನು ಜಯಶಾಲಿಯಾಗುವದಕ್ಕೆ ಕಾರಣಳಾಗುತ್ತಾಳೆ. ಉಣ್ಣೆಯನ್ನು ನೇತುಹಾಕಿದ್ದ ವೃಕ್ಷವನ್ನು ಕಾಯುವ ಸರ್ಪವು ನಿದ್ದೆಮಾಡುವಂತೆ ಮಂತ್ರಪ್ರಯೋಗವನ್ನು ಅವಳು ಮಾಡಿ-ದಳು.

ಇದು (ಚಿನ್ನದ ಉಣ್ಣೆ ಮೂಡಿದ ಸೂರ್ಯ ಕಿರಣ-ಗಳಿಂದು) ಸೂರ್ಯ ಕಥೆಯೆಂದು ವಿವರಿಸುವುದು ಸರಿಯಲ್ಲ. ಜೇಸನ್ ನಿಜವಾಗಿ ಐತಿಹಾಸಿಕ ವೀರನು. ಅವನು ತನ್ನ ರಾಜಮನೆತನದಲ್ಲಿನ ಅಧಿಕಾರ ಸ್ಪರ್ಧೆಯ ಫಲವಾಗಿ ಪೂರ್ವಕ್ಕೆ ಹೋಗಿ ಅಲ್ಲಿಯ ರಾಜಕುಮಾರಿಯನ್ನು ಮದುವೆಯಾಗಿ ಬಂದಿರಬಹುದು (ರಾಬರ್ಟ್ ಗ್ರೇವ್ಸ್). ನದಿಯ ಮಣ್ಣಿನಲ್ಲಿ ಸಿಗುವ ಚಿನ್ನದ ಮರಳನ್ನು ಉಣ್ಣೆಯ ಚರ್ಮದ ಮೂಲಕ ತೊಳೆದು ಚಿನ್ನವನ್ನು ಕೂಡಿಸುತ್ತಿದ್ದರು. ಚಿನ್ನದ ಉಣ್ಣೆಯ ಕಥೆ ಇದರಿಂದ ಮೂಡಿರಬಹುದು. ಆದರೂ ಜೇಸನ್ನನ ಯಾತ್ರೆ ನದಿಯ ಚಿನ್ನದ ಸಂಪಾದನೆಗಾಗಿಯೇ ಎಂದು ನಿಶ್ಚಿತವಾಗಿ ಹೇಳಲಾಗದು ಎಂದು ಹೆಲಿಡೇಯವರ ಅಭಿಪ್ರಾಯ.

ಪರರಾಜ್ಯಗಳ ಮೇಲೆ ಮಾಡಿದ ದಾಳಿಗಳು, ಜನಾಂಗ-ಗಳು ಗುಳೆಹೋಗುವದು, ವಸಾಹತುಗಳ ಸ್ಥಾಪನೆ, ರಾಜ

ವಂಶಗಳ ಬದಲಾವಣೆ, ಪರದೇಶಗಳ ದೇವತೆಗಳನ್ನಂಗೀಕರಿಸುವದು, ಸಾಮಾಜಿಕ ಸುಧಾರಣೆಗಳನ್ನು ತರುವ ಸಂದರ್ಭ–ಇವನ್ನೆಲ್ಲ ಶೀಘ್ರಲಿಪಿಯ ಹಾಗೆ ನಾಟಕೀಯ ರೂಪದಲ್ಲಿ ತೋರಿಸುವ ದಾಖಲೆಗಳು ಪುರಾಣಕಥೆಗಳು ಎಂದು ರಾಬರ್ಟ್ ಗ್ರೇವ್ಸ್ ಹೇಳುವದು ಮಾರ್ಮಿಕವಾಗಿದೆ. ಪ್ರಾಚೀನ ಸಾಮಾಜಿಕ ಇತಿಹಾಸ ಅನೇಕ ಪುರಾಣಕಥೆಗಳಲ್ಲಡಗಿದೆ.

ಗ್ರೀಸಿನ ತೀರ ಮೊದಲಿನ ಜನಾಂಗದವರ ಕಥೆಗಳಲ್ಲಿ ಮಾತೃದೇವತೆಯ ಮಹತ್ವ ಹೆಚ್ಚಾಗಿತ್ತು. ಮೆಸೊಪೊಟೇಮಿಯಾದಲ್ಲಿಯೂ ಮೊದಲು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿದ್ದ ಕಾಲದಲ್ಲಿ ಟೆಯಾಮತ್ ಎಂಬ ಮಾತೃದೇವತೆ ಪ್ರಬಲಳಾಗಿದ್ದಳು. ಪಟ್ಟಣಿಗರ ದೇವತೆಯಾದ ಮರ್ದುಕನು ಟೆಯಾಮತ್ತಳೊಡನೆ ಹೋರಾಡಿ ಅವಳನ್ನು ಕೊಂದುದು ಪಿತೃ ಪ್ರಧಾನ ಕುಟುಂಬವ್ಯವಸ್ಥೆಯ (ಹಾಗೂ ಪುರುಷ ದೇವತೆಗಳ) ವಿಜಯದ ಸಂಗತಿಯೆಂದು ಗ್ರೇವ್ಸರು ಬರೆದಿದ್ದಾರೆ. ಗಿಲ-ಗಮೇಶ ಪುರಾಣ ಕಾವ್ಯದ ವರ್ಣನೆಯಲ್ಲಿಯೂ ಆರುರು ಎಂಬ ಮಾತೃದೇವತೆಯ ಪ್ರಭಾವವನ್ನು ಕುಗ್ಗಿಸುವ ದಂಗೆಯ ರೂಪ ಕಾಣುತ್ತದೆ. (ಭಾರತದಲ್ಲಿ ಜಗದಂಬೆ – ಭೂಮಿದೇವತೆಯ ಕಲ್ಪನೆಗಳಿವೆ.)

ಗ್ರೀಸಿನಲ್ಲಿ ಬಹಳ ಹಿಂದೆ ತ್ರಯೀ ಸ್ವರೂಪದ (ಮೂಡುವ ಚಂದ್ರ, ಏಳಿಗೆಯ ಚಂದ್ರ, ಮುಳುಗುವ ಚಂದ್ರ) ಚಂದ್ರ ದೇವತೆಯ ಪ್ರಭಾವವಿತ್ತು. ಸ್ತ್ರೀಯರ ಮಾಸಿಕಸ್ರಾವದ ಕ್ರಮ-

ದಂತೆ ಇಪ್ಪತ್ತೆಂಟು ದಿನಗಳ ಚಕ್ರ (Cycle) ಚಂದ್ರ ದೇವತೆ-ಗಿದ್ದುದರಿಂದ ಚಂದ್ರದೇವತೆಯ ಮಹತ್ವ ಹೆಚ್ಚಿಗೆ ಇತ್ತು. ಪೂಜಾರಿಣಿಯರಿಗೆ ಬಹಳ ಮಹತ್ವವಿತ್ತು. ಹೆಣ್ಣುನಾಯಿ, ಹೆಣ್ಣುಕುದುರೆ ಅಥವಾ ಹೆಣ್ಣುಹಂದಿಗಳ ಮುಖವಾಡ ಹಾಕಿಕೊಳ್ಳುತ್ತಿದ್ದರು.

ಸಂತಾನೋತ್ಪಾದನೆಯಲ್ಲಿ ಗಂಡಸರ ಅರಿವು ಪ್ರಾಚೀನ ಕಾಲದಲ್ಲಿರಲಿಲ್ಲ. ಗಾಳಿಯಿಂದಲಾಗಲಿ, ನದಿಗಳಿಂದಲಾಗಲಿ, ಬೀನ್ಸ್‌ಗಳನ್ನು ತಿಂದುದರಿಂದಲಾಗಲೀ. ಅಕಸ್ಮಾತ್ ಕೀಟವನ್ನು ನುಂಗಿದ್ದರಿಂದಲಾಗಲೀ ಹೆಂಗಸರು ಗರ್ಭವತಿಯರಾಗುವರೆಂದು ತಿಳಿಯುತ್ತಿದ್ದರು. (ಬೋರಿಯಾಸ್ ಅಂದರೆ ಗ್ರೀಕಭಾಷೆಯಲ್ಲಿ ಉತ್ತರದ ಗಾಳಿ. ಉತ್ತರದ ದಿಕ್ಕಿಗೆ ಹಿಂಭಾಗ ಮಾಡಿಕೊಂಡು ಹೆಣ್ಣು ಕುದುರೆಗಳು ನಿಂತರೆ ಕುದುರೆಯ ಮರಿಗಳು ಆ ಗಾಳಿಯಿಂದ ಜನಿಸುತ್ತವೆಂದು ನಂಬುತ್ತಿದ್ದರು.) ಸೃಷ್ಟಿಕರ್ತೃ (ಳ) ಸ್ಥಾನದಲ್ಲಿದ್ದ ಸ್ತ್ರೀಗೆ ಜೇನುಹುಳಗಳಲ್ಲಿ ರಾಣಿಹುಳಕ್ಕಿದ್ದ ಮಹತ್ವವಿತ್ತು. (ಭ್ರಮರ ರಾಣಿಯೆಂದು ಪೂಜಿಸುವ ಕ್ರಮವೂ ಇತ್ತು.) ಬೇಸಿಗೆಯ ರಾಣಿಯೆಂದು ಒಬ್ಬಳನ್ನು ಆರಿಸುತ್ತಿದ್ದರು. ಅವಳು ಪ್ರತಿವರ್ಷ ಒಬ್ಬೊಬ್ಬ ಪ್ರಿಯನನ್ನಾರಿಸಿಕೊಳ್ಳುತ್ತಿದ್ದಳು. ಬೇಸಿಗೆಯ ಕೊನೆಗೆ ಸೂರ್ಯನ ಶಕ್ತಿ ಕ್ಷಯಿಸಲಾರಂಭಿಸಿದಾಗ ಮತ್ತೊಬ್ಬ ಪ್ರಣಯಿಯನ್ನಾರಿಸಿಕೊಳ್ಳುತ್ತಿದ್ದಳು. ಚಳಿಗಾಲದ ಮಧ್ಯದಲ್ಲಿ ಅವನನ್ನು ಬಲಿ ಕೊಡುತ್ತಿದ್ದರು.

ಹೆಲೆನ್ ಜನರು ಗ್ರೀಸಿನಲ್ಲಿ ನೆಲಸಿ ಪ್ರಬಲರಾದಾಗ ಅವರೊಡನೆ ಬಂದ ಹೊಸ ದೇವತೆಗಳ ಆಧಿಪತ್ಯವುಂಟಾಯಿತು.

ಹೊಸ ಪುರಾಣಕಥೆಗಳು ನಿರ್ಮಾಣಗೊಂಡವು. ಜೂಸ್‌ದೇವನು ಮೆಟಿಸ್ ದೇವತೆಯನ್ನು ನುಂಗಿದ ಪುರಾಣಕಥೆ ಅವನು ದೇವತೆಯ ಪ್ರಭಾವವನ್ನು ಕುಗ್ಗಿಸಿದ ಘಟನೆಯನ್ನು ಚಿತ್ರಿಸುತ್ತದೆಯೆಂದು ವಿದ್ವಾಂಸರ ಊಹೆ. ಅಥೀನಿ ಜ್ಯೂಸ್‌ನ ತಲೆಯಿಂದ ಹುಟ್ಟಿದಳೆಂಬ ಕಥೆಯು ಆ ದೇವತೆಯ ಮಾತೃ-ಪ್ರಾಧಾನ್ಯವನ್ನು ತಪ್ಪಿಸುವ ಉಪಾಯವೆಂದು ಜೆ.ಇ. ಹ್ಯಾರಿಸನ್ ಬರೆದುದನ್ನು ಗ್ರೇವ್ಸರು ಸಮರ್ಥಿಸಿದ್ದಾರೆ.

ಡಯೊನಿಸಸ್ ಮೊದಲು ಏಷಿಯಾಮೈನರಿನ ದೇವತೆ. ಗ್ರೀಸಿನ ದೇವತೆಯಲ್ಲ. ಅವನು ದ್ರಾಕ್ಷಾರಸದ ದೇವತೆ. ಪೂರ್ವದೇಶಗಳಿಂದ ಬಂದ ಜನರು ಅಲ್ಲಿ ಅವನ ಪೂಜೆಯನ್ನು ಪ್ರಚಾರದಲ್ಲಿ ತಂದರು. ಮೊದಮೊದಲು ಗ್ರೀಕ್‌ಜನರಲ್ಲಿ ಹಲವರು ಆ ಹೊಸ ದೇವತೆಯನ್ನು ವಿರೋಧಿಸಿದರೆಂಬುದು ಯುರಿಪಿದೊಸ್ ಬರೆದ 'ಡಯೊನಿಸಸ್ ಭಕ್ತೆಯರು' (Bacchae) ಎಂಬ ನಾಟಕದಿಂದ ತಿಳಿಯುತ್ತದೆ. ಡಯೊನಿಸಸ್‌ನ ಪೂಜೆಯಲ್ಲಿ ದ್ರಾಕ್ಷಾರಸವನ್ನು ಸೇವಿಸಿ ಪ್ರಮತ್ತರಾದ ಸ್ತ್ರೀಯರು ಉತ್ಶೃಂಖಲರಾಗಿ ವರ್ತಿಸುತ್ತ ಪರವಶರಾಗುತ್ತಿದ್ದರು. ಥೀಬ್ಸಿನ ಪೆಂಥ್ಯೂಸ್‌ರಾಜನು ಡಯೋನಿಸಸ್‌ನ ಪೂಜೆಯನ್ನು ವಿರೋಧಿಸಿದವನು. ಅವನು ಭ್ರಮೆಯಿಂದ ಒಂದು ಎತ್ತನ್ನು ಡಾಯೋನಿಸಸ್ ಎಂದು ತಿಳಿದು ಕೊಂದನು. ಅವನ ತಾಯಿ ಅಗೆವೆ (Agave) ಎಂಬ ಭಕ್ತೆ ಇತರ ಸ್ತ್ರೀಯರೊಡನೆ ಕೂಡಿ ಅವನು ಎತ್ತು ಎಂದು ಭ್ರಮಿಸಿ ಅವನ ತಲೆಯನ್ನು ತರಿದಳು. ಡಯೋನಿಸಸ್‌ನ ಕಥೆ ಜನಪ್ರಿಯವಾದ ಮೇಲೆ ಅವನು ಜ್ಯೂಸ್‌ದೇವನ ಮಗನೆಂದು

ಪುರಾಣಕಥೆಮಾಡಿ ದೇವಮಂಡಲಿಯಲ್ಲಿ ಹನ್ನೆರಡನೆಯ ದೇವನೆಂದು ಅವನನ್ನು ಸೇರಿಸಿಕೊಂಡರು.

ಕ್ರೀಟನಲ್ಲಿ ಮಿನೊಸ್ ರಾಜನಿಗೆ ಸಂಬಂಧಪಟ್ಟ ಅರಮನೆ, ಸರೋವರ ಇತ್ಯಾದಿ ಶೋಧವಾಗಿವೆ. ಟ್ರಾಯ್ ಪಟ್ಟಣ ಕಥೆ ಐತಿಹಾಸಿಕವಾದದ್ದು. ಒಂದಾದ ಮೇಲೊಂದರಂತೆ ಒಟ್ಟು ಹತ್ತು ಟ್ರಾಯ್ ಪಟ್ಟಣಗಳು ಕಟ್ಟಲ್ಪಟ್ಟು ನಾಶ ಹೊಂದಿದವು. ಏಳನೆಯದೇ ಹೋಮರನ ಟ್ರಾಯ್ ಪಟ್ಟಣ. ಇತ್ತೀಚೆಗೆ ಟ್ರಾಯ್ ಪಟ್ಟಣದ ಉತ್ಖನನವಾಗಿ ಕೋಟೆ, ಪ್ರಿಯಾಂ ರಾಜನ ಅರಮನೆ ಇತ್ಯಾದಿ ಶೋಧವಾಗಿವೆ. "ಟ್ರಾಯ್ ಪಟ್ಟಣದ ಯುದ್ಧವು ಐತಿಹಾಸಿಕವಾಗಿದೆ. ತತ್ಕಾಲೀನ ಕಾರಣ ಯಾವುದೇ ಇದ್ದರೂ ಅದು ವ್ಯಾಪಾರದ ಯುದ್ಧವಾಗಿದೆ (Trade war). ಟ್ರಾಯ್ ಪಟ್ಟಣ ಆಯಕಟ್ಟಿನ ಜಾಗದಲ್ಲಿದ್ದು ಕಪ್ಪುಸಮುದ್ರದ ಭಾಗದ ಬಹುಮೌಲ್ಯ ವ್ಯಾಪಾರವನ್ನು ನಿಯಂತ್ರಿಸುತ್ತದೆ. ಆ ಯುದ್ಧವನ್ನು ಗೆದ್ದು ಪೂರ್ವಭಾಗದ ವ್ಯಾಪಾರದ ದಾರಿಗಳ ಪ್ರದೇಶಗಳಲ್ಲಿ ಗ್ರೀಕರು ವಸಾಹತುಗಳನ್ನು ಸ್ಥಾಪಿಸಿದರು." ಎಂದು ರಾಬರ್ಟ್ ಗ್ರೇವ್ಸ್ ಬರೆದಿದ್ದಾರೆ. (ಸೀತಾಕುಂಡ ಎಂಬಲ್ಲಿ ಹದಿನೆಂಟು ಅಡಿ ಉದ್ದದ ಮಾನವ ಅಸ್ಥಿಪಂಜರ ದೊರಕಿದ್ದು ಅದು ಶೂರ್ಪಣಖಿಯದಾಗಿರಬೇಕೆಂದು ಒಂದು ಪತ್ರಿಕೆಯಲ್ಲಿ ಸುದ್ದಿ ಬಂದಿತ್ತು!)

ಪ್ರಾಚೀನ ಪುರಾಣಕಥೆಗಳು ಪ್ರಾಚೀನ ಸಾಮಾಜಿಕ ಆಚರಣೆಗಳ ಅವಶೇಷಗಳು. ಅನೇಕತರದ ವಿಧಿಕ್ರಮಗಳ ಈ ಪುರಾಣ

ಕಥೆಗಳಲ್ಲಿ ಮೂಡಿ ಪ್ರಾಚೀನರ ಆಚಾರ-ವಿಚಾರಗಳ ಕುರಿತು ತಿಳಿವಳಿಕೆಯನ್ನು ಕೊಡುತ್ತವೆ. ವಿಚಿತ್ರವಾದ ಕೆಲವು ಕಥೆಗಳು ಆಗಿನ ಕಾಲದಲ್ಲಿ ಆಚರಣೆಯಲ್ಲಿದ್ದ ವಿಚಿತ್ರವಾದ ನಡೆವಳಿಕೆಗಳನ್ನು ಒಳಗೊಂಡಿವೆ. ದೇವತೆಗಳ ಸೃಷ್ಟಿಕಥೆಯಲ್ಲಿನ ಆಕಾಶ ದೇವತೆ ಯುರೇನಸನು ನಿದ್ರಿಸುತ್ತಿದ್ದಾಗ ಅವನ ಪ್ರತಿಸ್ಪರ್ಧಿಯಾದ ಮಗ ಕ್ರೊನೊಸನು ಅವನ ಲಿಂಗಚ್ಛೇದ ಮಾಡಿದನೆಂಬ ಕಥೆಯ ಅರ್ಥದ ವೈಚಿತ್ರ್ಯವು ನಮಗೆ ಅರ್ಥವಾಗಬೇಕಾದರೆ ಪ್ರಾಚೀನ ಜನಾಂಗಗಳಲ್ಲಿ ಪವಿತ್ರರಾಜ (Sacred King) ನನ್ನು ಅವನ ಸೋದರನಾಗಲಿ, ಅವನ ಪ್ರತಿಸ್ಪರ್ಧಿಯಾದ (Tanist) ಇನ್ನೊಬ್ಬನಾಗಲಿ ಕೊಂದು ಇಲ್ಲವೆ ಲಿಂಗಚ್ಛೇದ ಮಾಡಿ ಅರಸನಾಗಿ ಅವನ ರಾಣಿಯನ್ನು ಮದುವೆಯಾಗುವ ಇತರ ಪುರಾಣ ಕಥೆಗಳಿಂದ ದೊರೆಯುವ ಆಗಿನ ಸಾಮಾಜಿಕ ಹಾಗೂ ರಾಜಕೀಯ ಚರಿತ್ರೆಯೊಡನೆ ವಿಚಾರ ಮಾಡಬೇಕು. ಆಗ ಇದು (ದೇವನೆಂದು ತಿಳಿಯಲಾದ) ಪವಿತ್ರರಾಜನ ಕುರಿತಾದ ವಿಧಿಕ್ರಮ ಕಥೆಯೆಂಬುದು ಸ್ಪಷ್ಟವಾಗುತ್ತದೆ.

ಭಿಕ್ಷುಕರ ರಾಜನಾದ ಓಲೆ (Ole) ಎಂಬವನು ಒಬ್ಬ ಸೇವಕನಿಗೆ ಹೆಣ್ಣುವೇಷ ಹಾಕಿ ತಾನು ಗುಪ್ತರೂಪದಿಂದ ರಾಜನಾದ ಥೋರೆಯ ಮನೆಗೆ ಬಂದು ಥೋರೆಯನ್ನು ಕೊಂದು ಕಿರೀಟವನ್ನು ತೆಗೆದುಕೊಂಡ ಕಥೆಯನ್ನು ಸೇಕ್ಸೋ ಗ್ರೆಮೇಟಿಕಸ್ ಕೊಟ್ಟಿದ್ದಾನೆ. ಪ್ರಾಚೀನ ಕಾಯಿದೆಯ ಪ್ರಕಾರ ರಾಜನನ್ನು ಕೊಂದವನಿಗೆ ಅರಸನಾಗುವ ಅಧಿಕಾರ ಬರುತ್ತಿತ್ತೆಂದು ಅವನು ಸ್ಪಷ್ಟವಾಗಿ ಬರೆದಿದ್ದಾನೆ.

ಕ್ರೋನೋಸನು ತನ್ನ ಮಕ್ಕಳನ್ನು ನುಂಗುವ ಕಥೆಯಲ್ಲಿ ತನ್ನ ಜೀವಿತವನ್ನು ದೀರ್ಘಮಾಡಿಕೊಳ್ಳಲು ಕಾಲಕಾಲಕ್ಕೆ ಮಕ್ಕಳನ್ನು ಬಲಿಕೊಡುವ ಸಂಪ್ರದಾಯವನ್ನು ತೋರಿಸುತ್ತದೆ ಯೆಂದು ಮಿಡ್ಲಟನ್ ಮರ್‍ರಿಯುವರು ಬರೆದಿದ್ದಾರೆ. ಈ ಕಥೆಯಲ್ಲಿ ತಂದೆಗಳು ತಮ್ಮ ಮಕ್ಕಳನ್ನು ತಿನ್ನುವ ಪುರಾತನ ಅವಸ್ಥೆಯ ಅವಶೇಷವಿದೆಯೆಂದು ಎಂಡ್ರೂ ಲೇಂಗರ ಅಭಿಪ್ರಾಯ !

ತಾಯಿಪ್ರಾಣಿ ತಾನು ಮರಿ ಹಾಕಿದಾಗ ತನ್ನ ಮರಿ-ಗಳನ್ನು ತಿಂದು ಬಾಣಂತಿತನವನ್ನು ಆಚರಿಸುವಂತೆಯೇ (ರಾಕ್ಷಸಿ) ತಾಯಿ ಸಹ ತನ್ನ ಶಿಶುಗಳನ್ನು ತಿನ್ನುವ ಕಥೆಗಳು ಈ ಪ್ರಾಚೀನ ಪದ್ಧತಿಯನ್ನು ಸೂಚಿಸಬಹುದು !

## ೫. ಟೋಟೆಂ ಪುರಾಣ

ಕೆಲವು ಪುರಾಣಸೃಷ್ಟಿಯನ್ನು ಟೋಟೆಂ ಕಲ್ಪನೆಯಿಂದಲೂ ವಿವರಿಸುವದುಂಟು. **ಟೋಟೆಂ** (Totem) ಎಂಬ ಶಬ್ದ ಚಿಪ್ಪೆವೇ ಇಂಡಿಯನ್‌ರ ಭಾಷೆಯಿದು. ಅದರ ಅರ್ಥ- "ನನ್ನ ಸಂಬಂಧದ್ದು" ಎಂದಿದೆ. ಪ್ರಾಣಿಯಾಗಲಿ, ವನಸ್ಪತಿಯಾಗಲಿ ತನ್ನ ಕುಲದೊಡನೆ ಸಂಬಂಧ ಹೊಂದಿದ್ದು ಎಂದು ವಿವರಿಸುತ್ತಾರೆ. ಈ ಕುಲಸಂಬಂಧಕ ಪ್ರಾಣಿಗಳು ಆಯಾ ಕುಲದವ-ರಿಗೆ ಪವಿತ್ರವಾಗಿವೆ. ಇವು ಗೋತ್ರವ್ಯವಸ್ಥೆಯ ಉದ್ದೇಶ-ಗಳನ್ನು ತಕ್ಕಮಟ್ಟಿಗೆ ನೆರವೇರಿಸುತ್ತವೆ. ಒಂದು ಕುಲಸಂಬಂಧ

ದಲ್ಲಿ ಹುಟ್ಟಿದ ಹೆಣ್ಣನ್ನು ಅದೇ ಕುಲಸಂಬಂಧವುಳ್ಳವನಿಗೆ ಮದುವೆ ಮಾಡುವದು ಇಲ್ಲಿ ನಿಷಿದ್ಧವಾಗಿದೆ. ಹಾಲಕ್ಕಿ ಒಕ್ಕಲಿಗರಲ್ಲಿ ಇದಕ್ಕೆ "ಬಳಿ" (ಕುಲ) ಎನ್ನುತ್ತಾರೆ. ಇದರಿಂದ ಮಿಕದ ಬಳಿ, ಕಡವಿನ ಬಳಿ ಇತ್ಯಾದಿ ಕುಲಸಂಕೇತಗಳೇರ್ಪಟ್ಟಿವೆ. ಅವರು ಆಯಾ ಮೃಗ ತಮ್ಮ ದೇವರೆಂದು ಹೇಳುತ್ತಾರೆ. ಅದನ್ನು ಅವರು ಹೊಡೆದು ತಿನ್ನುವುದಿಲ್ಲ. ಆಯಾ ಪ್ರಾಣಿಗಳು ತಮ್ಮ ಪಿತೃಗಳೆಂಬ ಭಾವನೆಯೂ ಇದರ ಹಿನ್ನೆಲೆಯಲ್ಲಿರಬಹುದಾಗಿದೆ. ಇಂಥ ಪ್ರಾಣಿಗಳ ಸಂಕೇತದಿಂದ ಕೆಲವು ದೇವತೆಗಳ ಪುರಾಣಕಥೆಗಳಾಗಿರಬಹುದೆಂದು ಅಭಿಪ್ರಾಯವಿದೆ.

ಇಜಿಪ್ತಿನ ಸ್ಮಶಾನದೇವತೆ ಅನುಬಿಸ್ ನರಿಯ ರೂಪಿನದು. ಬುದ್ಧಿಯ ದೇವತೆ ಥೋತ್ ಇಬಿಸ್ ಹಕ್ಕಿಯ ಮೋರೆಯುಳ್ಳದು. ಬಾಸ್ತ್‌ದೇವತೆಯ ರೂಪ ಬೆಕ್ಕಿನದು. ಆಮೇಲೆ ಪರದೇಶಗಳ ಪ್ರಭಾವದಿಂದ ಇಜಿಪ್ತಿನ ದೇವತೆಗಳಿಗೆ ಮನುಷ್ಯರ ರೂಪವನ್ನು ಕೊಟ್ಟರೂ ಆಯಾ ಪ್ರಾಣಿಗಳ ಆಕಾರಗಳನ್ನು ತಲೆಯ ಭಾಗದಲ್ಲಿ ಸೇರಿಸುತ್ತಿದ್ದರು. ಒಂದೊಂದು ಪಂಗಡದ ಟೋಟೆಂ ಪ್ರಾಣಿಯು ದೇವರೆಂದು ಪೂಜಿತವಾಗಿ ಅದರಿಂದ ಕೆಲವು ಪುರಾಣಕಥೆಗಳಾಗಿರಬಹುದೆನ್ನುತ್ತಾರೆ. ಆದರೆ ಟೋಟೆಂ ದೇವತೆಗಳನ್ನು ಪೂಜಿಸುವ ಪದ್ಧತಿಯಿರಲಿಲ್ಲವಾದುದರಿಂದ ಈ ಕುಲಸಂಬಂಧಕಗಳ ಮೂಲಕ ಪುರಾಣಕಥೆಗಳು ಬೆಳೆದಿರಲಾರವು ಎನ್ನುವವರೂ ಉಂಟು. ಟೋಟೆಂ ತತ್ವಪ್ರತಿಪಾದಕರಿಗೆ ಈ ವಿಷಯ ಅಷ್ಟು ಖಚಿತವಾಗಿಲ್ಲ. ಉದಾಹರಣೆಗೆ ಫಿಲಿಪ್ ಸ್ಪೇಟ್‌ರು "ಗಣಪತಿ-ಆನೆಯ ಕುಲಸಂಕೇತವುಳ್ಳ ಜನರ ದೇವತೆ

ವಾಗಿರಬಹುದು ಅಲ್ಲದೆ ಇಲಿಯು ಕುಲಸಂಕೇತವುಳ್ಳ ಜನರ ಮೇಲೆ ವಿಜಯ ಪಡೆದವರ ಸೂಚಕವಾಗಿರಬಹುದು!" ಎಂದು ಅನುಮಾನ ಮಾಡಿದರೂ ಈ ದೇವತೆ ಇಷ್ಟು ಸಾರ್ವತ್ರಿಕವಾಗಿ ಪೂಜೆ ಪಡೆಯುತ್ತಿರುವುದರಿಂದ ಹೀಗೆ ಟೋಟೆಂರೀತಿಯ ವಿವರಣೆ ಕೊಡಲು ಆಧಾರವಿಲ್ಲವೆಂದೂ ಅವರಿಗೆ ಅನಿಸಿದೆ.

ಹಾಫ್‌ಕಿನ್ಸರು "ಆಕಳು ಜೀವನಾವಶ್ಯಕವಾದ ರೀತಿಯಲ್ಲಿ ಉಪಕಾರ ಮಾಡುವ ಪ್ರಾಣಿಯಾದುದರಿಂದ ಅದಕ್ಕೆ ದೇವತ್ವ ವನ್ನು ಕಲ್ಪಿಸಿದುದು ಕುಲ ಸಂಕೇತದ ಅಂಶವನ್ನು ಹೊಂದಿದೆ" ಎಂದುದೂ ಸರಿಯಲ್ಲ. ಹಾಗಿದ್ದರೆ ಭಾರತೀಯರೆಲ್ಲರೂ ಆಕಳಿನ ಬಳಿಯುವರಾಗಿರಬೇಕಾಯಿತು !

ಬೇರೆ ದೇಶಗಳ ಪುರಾಣಗಳ ದೇವರುಗಳ ಆಕಾರಗಳ ಲ್ಲಿಯೂ ಪ್ರಾಣಿಗಳ ಆಕಾರಗಳ ಭಾಗಗಳುಂಟು. ಗ್ರೀಸದ ಪಾನ್ ಎಂಬ ನಿಸರ್ಗದೇವತೆಗೆ ಆಡಿನ ಕೋಡುಗಳೂ ಕೊಳಚು ಗಳೂ ಉಂಟು. (ಮಧ್ಯ ಅಮೇರಿಕಾದ ಮಯ ಜನಾಂಗದವರ ಗೋವಿನಜೋಳದ ದೇವತೆಯ ತಲೆದೊಡಿಗೆಯಲ್ಲಿ ಗೋವಿನ ಜೋಳದ ತೆನೆಗಳು ಸೇರಿಸಲ್ಪಟ್ಟಿವೆ.)

ಈ ದೇವತೆಗಳ ಪ್ರಾಣಿರೂಪಗಳಿಗೆ ಸಾಂಕೇತಿಕ ಅರ್ಥ ಗಳು ಇರಬಹುದು. ಉದಾಹರಣೆಗೆ ಥೊತ್‌ದೇವನ ಮೋರೆಯ ಇಬಿಸ್ ಹಕ್ಕಿ ಬುದ್ಧಿವಂತ ಹಕ್ಕಿ. ಹೋರಸ್‌ದೇವನ ಗಿಡಗ ಸೂರ್ಯನ ಸಂಕೇತ. ಗಣಪತಿಯ ಆನೆ ಬುದ್ಧಿಯ ಪ್ರತೀಕ ವಾಗಿರಬಹುದು. ಬೆಳೆ ಹೆಚ್ಚು ಮಾಡಲು ಮಾಡುವ ಅಭಿವೃದ್ಧಿ

ಸಂಸ್ಕಾರ (Fertility rite) ದ ಪ್ರತೀಕವಾಗಿ ಗಣಪತಿಯ ಕಲ್ಪನೆಯು ವಿಕಾಸವಾಗಿರಬಹುದು. ಗಣಪತಿಯ ಸೊಂಟಕ್ಕೆ ಸುತ್ತಿದ ಹಾವು ಬೆಳೆಗಳನ್ನು ಹಾಳು ಮಾಡುವ ಇಲಿ ಹೆಗ್ಗಣ-ಗಳನ್ನು ನಾಶಮಾಡಿ ಬೆಳೆಗಳನ್ನು ರಕ್ಷಿಸುತ್ತದೆ. ಇಲಿಯು ವಾಹನವಾಗಿದ್ದುದು ಅದನ್ನು ನಿಗ್ರಹಿಸುವುದರ ಸಂಕೇತ. ಗಣಪತಿ ಆನೆಯ ಮೋರೆಯುವನಾಗಿದ್ದರೂ ಅವನ ಕೈಯಲ್ಲಿರುವ ಅಂಕುಶವು ಬೆಳೆಯನ್ನು ಹಾಳುಮಾಡುವ ಆನೆಯ ನಿಗ್ರಹ ಸೂಚಕವಾಗಿರಬಹುದು.

ಆದರೂ ಕುಲ-ಸಂಕೇತಗಳ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢವಾಗಿದ್ದರಿಂದ ಪುರಾಣದ ಪ್ರಾಣಿದೇವತೆಗಳಲ್ಲಿ ಕೆಲವಾದರೂ ಟೋಟೆಂಗಳಿಂದ ವಿಕಾಸಹೊಂದಿರಬಹುದು. ಸರ್ಪಕುಲದವನಾದ ವಾಸುಕಿ ಸರ್ಪಕುಲಸಂಕೇತದ ಮೂಲಕ ಸರ್ಪವೆಂದು ವ್ಯವಹೃತನಾದ ಮನುಷ್ಯನಿರಬಹುದು. ಭೀಮನು ಅವನ ಕುಲದ ನಾಗಕನ್ಯೆಯನ್ನು ವರಿಸಿದ ಕಥೆಗೆ ಇದರಿಂದ ಸಮಂಜಸತೆ ಬರುತ್ತದೆ. ರಾಮಾಯಣದ ಜಾಂಬವಂತನು ಬ್ರಹ್ಮನು ಆಕಳಿಕೆ ತೆಗೆಯುವಾಗ ಹುಟ್ಟಿದವನು. ಅವನು ಕರಡಿಯೆಂದೂ, ಮಂಗನೆಂದೂ. ರಾಮಾಯಣದಲ್ಲಿಯೇ ಹೇಳಿದೆ. ಆ ಜಾಂಬವಂತನ ಮಗಳನ್ನು ಕೃಷ್ಣನು ಮದುವೆಯಾದನು. ಅವಳು ಅವನ ಮಗಳಾದರೆ ಕರಡಿಯೇ‌ಕಲ್ಲ? ಅಥವಾ ಕರಡಿ ಸಾಕಿದ ಹುಡುಗಿಯೆನ್ನಬೇಕೇ? ಕರಡಿಯ (ಅಥವಾ ಪಾಠಾಂತರದಲ್ಲಿ ಮಂಗನ) 'ಬಳಿ'ಯ ರಾಜನೆಂದು ತಿಳಿದರೆ ಸಮಸ್ಯೆಗೆ ಸುಲಭ ಪರಿಹಾರ ದೊರೆಯುತ್ತದೆ.

ಪ್ರಾಚೀನ ವಿಧಿಕ್ರಮಗಳಲ್ಲಿ ಪವಿತ್ರರಾಜನು ಪ್ರಾಣಿಗಳ ವೇಷ ಹಾಕಿಕೊಂಡ ನರ್ತಕರೊಡನೆ ಹಬ್ಬದ ಉತ್ಸವದಲ್ಲಿ ಹೋರಾಡುವ ಪದ್ಧತಿಯಿತ್ತೆಂದು ರಾಬರ್ಟ್ ಗ್ರೇವ್ಸ್‌ರು ಬರೆದಿದ್ದಾರೆ. ಗ್ರೀಸದ ಸಾಟಿರ್ (Satyr) ಎಂಬ ಪುರಾಣ ವ್ಯಕ್ತಿಗಳು ಆ ದಿನ ಮುಖವಾಡ ಮತ್ತು ಬಾಲಗಳನ್ನು ಧರಿಸಿಕೊಳ್ಳುವುದನ್ನು ಈ ಪದ್ಧತಿಯಿಂದ ವಿವರಿಸುತ್ತಾರೆ. ಸಿಂಹದ ಚರ್ಮ ಧರಿಸಿದ್ದ ಹೆರಾಕ್ಲಸನು ಕೆಂಟಾರ (ಕೆಳಭಾಗ ಅಶ್ವರೂಪ-ಮೇಲ್ಭಾಗ ಮನುಷ್ಯರೂಪವುಳ್ಳ ಕಿನ್ನರ) ರೊಡನೆ ಹೋರಾಡಿದ ಉದಾಹರಣೆಯನ್ನೂ ಅವರು ಕೊಟ್ಟಿದ್ದಾರೆ.

ಪ್ರಾಣಿಗಳ ಚರ್ಮಗಳನ್ನು ಇಡಿಯಾಗಿ ಪೋಷಾಕಿನಂತೆ ಧರಿಸಿ ಓಡಾಡಿದ ಪದ್ಧತಿ ಹಿಂದಿನ ಕಾಲದಲ್ಲಿತ್ತು. (ಪ್ರಾಣಿಗಳು ಮಾತನಾಡುತ್ತವೆಂಬ ನಂಬಿಕೆಗೂ ಈ ವೇಷ ಕಾರಣವಾಗಿರಬಹುದು.) ಕಿಂದಮ ಋಷಿಯು ಚಿಗರೆಯ ರೂಪದಲ್ಲಿ ಪತ್ನಿಯೊಡನೆ ವಿಲಾಸಮಾಡುತ್ತಿರುವಾಗ ಪಾಂಡುರಾಜನು ಚಿಗರೆಯೆಂದು ಭ್ರಮಿಸಿ ಬಾಣ ಹೊಡೆದಾಗ ಕಿಂದಮ ಋಷಿಯು ಪ್ರಾಣಿಯ ರೂಪವನ್ನು ಬಿಟ್ಟು ಋಷಿರೂಪದಲ್ಲಿಯೇ ಸಾಯುತ್ತಾನೆ. ಮಾರೀಚನ ಚಿನ್ನದ ಬಣ್ಣದ ಚಿಗರೆಯ ರೂಪವನ್ನೂ ಹೀಗೆಯೇ ವೇಷವೆಂದು ವಿವರಿಸಬಹುದು. ರಾಮಾಯಣದಲ್ಲಿ ಬರುವ ಸೌದಾಸನು ಒಂದು ಹುಲಿಯೆಂದು ತಿಳಿದು ಪುರುಷ ವ್ಯಾಘ್ರವನ್ನು ಹೊಡೆದನು. ಆ ವ್ಯಾಘ್ರದ ರೂಪಿಗೂ ಅವನ ಸಂಗಡಿಗ ಮನುಷ್ಯರೂಪದಿಂದ ಪ್ರತೀಕಾರ ಮಾಡಿದುದಕ್ಕೂ ಹೀಗೆಯೇ ವಿವರಣೆ ಕೊಡಬಹುದು. ಮಾಯಾವಿಗಳಾದ ರಾಕ್ಷ-

ಸರು ಕಾಮರೂಪಿಗಳಾಗಿ ಬೇಕಾದ ಪ್ರಾಣಿರೂಪ ಧರಿಸುತ್ತಿದ್ದ ಕಥೆಗಳಿಗೂ ಹೀಗೆಯೇ ಹೇಳಬಹುದು.

## ೬. ಮನೋವೈಜ್ಞಾನಿಕ ಅಭ್ಯಾಸ

ಮನೋವೈಜ್ಞಾನಿಕ ಅಭ್ಯಾಸಗಳಿಗೆ ಪುರಾಣಕಥೆಗಳನ್ನು ಮೊದಲು ಬಳಸಿಕೊಂಡ ಕೀರ್ತಿ ಜರ್ಮನಿಯ ಸಿಗ್ಮಂಡ ಫ್ರಾಯ್ಡರಿಗೆ ಸಲ್ಲುತ್ತದೆ. ತೀರ ಚಿಕ್ಕಂದಿನಿಂದಲೂ ಮಾನವ ನಲ್ಲಿ ಕಾಮ (Libido) ಪ್ರಮುಖವಾಗಿದೆಯೆಂದು ಅವರು ಪ್ರತಿ-ಪಾದಿಸಿದ್ದಾರೆ. ಬಾಲ್ಯದಲ್ಲಿ ಒಂದು ವಯಸ್ಸಿನ ಮಟ್ಟದಲ್ಲಿ ತನ್ನ ತಾಯಿಯ ಮೇಲಿನ ಪ್ರೀತಿಗೆ ತಂದೆ ಪ್ರತಿಸ್ಪರ್ಧಿಯೆಂದು ತಂದೆಯ ಮೇಲೆ ದ್ವೇಷವುಂಟಾಗುತ್ತದೆ. ಈ ತಾಯಿ-ಮಗನ ನಲ್ಮೆಯನ್ನೂ ತಂದೆ-ಮಗಳ ನಲ್ಮೆಯನ್ನೂ ಅವರು ಈಡಿಪಸ್ ಗಂಡ (Oedipus Complex) ಎಂದು ಈಡಿಪಸ್ ಎಂಬ ಗ್ರೀಕ ಪುರಾಣ ರಾಜನ ಕಥೆಯ ಸಂಕೇತದಿಂದ ವಿವರಿಸಿದ್ದಾರೆ. ಈಡಿಪಸ್ ತನ್ನ ತಂದೆಯನ್ನು ಕೊಂದು ತಾಯಿಯನ್ನು ಮದುವೆಯಾಗುವನೆಂದು ದೇವವಾಣಿ (Oracle) ಆದುದರಿಂದ ಅವನ ತಂದೆ ಲೈಯಾಸನು ಶಿಸುವಿನ ಕಾಲು ಕಟ್ಟಿ ಸಿಥೆರೋನ್ ಪರ್ವತದ ಮೇಲೆ ಬಿಟ್ಟು ಬರಲು ಕುರುಬನೊಬ್ಬನಿಗೆ ನೇಮಿಸಿ-ದನು. ಅವನು ಕರುಣೆಯಿಂದ ಅದನ್ನು ಕೊಲ್ಲದೆ ಕಾರಿಂಥದ ರಾಜನಿಗೆ ಒಪ್ಪಿಸಿದನು. ದೊಡ್ಡವನಾದಮೇಲೆ ಈಡಿಪಸ್ ತಂದೆಯನ್ನು ಕೊಂದನು. ಥೀಬ್ಸಿನ ಸ್ಫಿಂಕ್ ಎಂಬ ಪುರಾಣಪ್ರಾಣಿ

ಹಾಕಿದ ಒಗಟನ್ನು (Riddle) ಬಿಡಿಸಿ ತಾಯಿ ಜೋಕಾಸ್ಟಾಳನ್ನು ಮದುವೆಯಾಗಿ ಅಲ್ಲಿಯ ರಾಜನಾದನು. ಈ ಕಥೆಯಲ್ಲಿ ಈಡಿಪಸ್‌ನಿಗೆ ತಂದೆಯನ್ನು ಕೊಲ್ಲುವೆನೆಂದಾಗಲೀ, ಜೋಕಾಸ್ಟಾಳ ತನ್ನ ತಾಯಿಯೆಂಬುದಾಗಲಿ ತಿಳಿದಿರುವುದಿಲ್ಲ. ಆದರೆ ಈ ಕಥೆಯನ್ನು ತಾಯಿ-ತಂದೆಗಳನ್ನು ಬಲ್ಲ ಹುಡುಗರ ಮಾನಸಿಕ ಅವಸ್ಥೆಯನ್ನು ವಿವರಿಸಲು ಫ್ರಾಯ್ಡರು ಬಳಸಿದ್ದಾರೆ. (ಬಹಳ ಜನರು ಪ್ರಬುದ್ಧರಾದಾಗ ಈ ಗಂಡದಿಂದ ಮುಕ್ತರಾಗಿರುತ್ತಾರೆ.) ಆದರೆ ಈ ಕಥೆ ರಾಜನನ್ನು ಕೊಂದು ಆತನ ರಾಣಿಯನ್ನು ಮದುವೆಯಾಗುವ ವಿಧಿಕ್ರಮದ ಕಥೆಯೆಂದು ರಾಬರ್ಟ್ ಗ್ರೇವ್ಸ್‌ರು ವಿವರಿಸಿದ್ದುಂಟು.

ಒರೆಸ್ಟಸನ ಕಥೆಯಲ್ಲಿ ಅವನ ತಂಗಿ ಇಲೆಕ್ಟ್ರಾ ತನ್ನ ತಂದೆ ಅಗಮೆಮ್ನನ್‌ನನ್ನು ಕೊಲೆ ಮಾಡಿದ ತಾಯಿ ಕ್ಲಿಟೆಮ್ನೆಸ್ಟ್ರಾ-ಳನ್ನು ದ್ವೇಷಿಸಿ ತಂದೆಯನ್ನು ಪ್ರೀತಿಸುತ್ತಾಳೆ. ಇದಕ್ಕೆ ಇಲೆಕ್ಟ್ರಾ ಗಂಡ (Electra Complex) ಎಂದೂ ಹೇಳುವದುಂಟು.

ಆತ್ಮರತಿಯ ಮನೋವೈಜ್ಞಾನಿಕ ತತ್ವವನ್ನು ವಿವರಿಸಲು ನಾರ್ಸಿಸಸ್‌ನ ಕಥೆ ಬಳಕೆಯಾಗಿದೆ. ತನ್ನ ಅಂದಕ್ಕೆ ಮರುಳಾಗಿ (ತನ್ನಷ್ಟಕ್ಕೆ ತಾನೇ ನಲಿವ) ನಾರ್ಸಿಸಸ್ ಇನ್ನಾರನ್ನೂ ಪ್ರೀತಿಸಲಾರನಾದನು. ಅಹಂಕಾರದ ಎಲ್ಲ ತರದ ರೀತಿಗಳಿಗೂ ಈ ನಾರ್ಸಿಸಂ ಎಂಬ ಶಬ್ದ ರೂಢವಾಗಿದೆ.

ಗ್ರೀಕರ ಅಫ್ರೊಡೈಟೆ ಹರ್ಮಿಸ್‌ದೇವನ ಸರಸ-ಸಲ್ಲಾಪಗಳಿಗೆ ಮರುಳಾಗಿ ಅವನೊಡನೆ ಕಳೆದ ರಾತ್ರಿಯ ಫಲವಾಗಿ

ಹರ್ಮಾಫ್ರೊಡೈಟಿಸ್ ಎಂಬ ಉಭಯಲಿಂಗಿ ಸಂತಾನವೊಂದು ಜನಿಸಿತು. ಈ ಪುರಾಣಕಥೆ ದೈಹಿಕವಾಗಿಯೂ, ಮಾನಸಿಕವಾಗಿಯೂ ಉಭಯಲಿಂಗಿಗಳು ಕ್ವಚಿತ್ತಾಗಿ ಕಾಣುವ ಸತ್ಯದ ಪುರಾಣಪ್ರತೀಕವಾಗಿದೆ.

ಥಾನಟೋಸ್, (Thanatos) ಮರಣದ ದೇವತೆ. ಅದನ್ನು ಫ್ರಾಯ್ಡರು ಮಾನವರಲ್ಲಿನ ಸಾವಿನ ಪ್ರವೃತ್ತಿ (Death Instinct) ಯ ಸಂಕೇತವಾಗಿ ಬಳಸಿದ್ದಾರೆ. ಈರೋಸ್ (ಕಾಮ) ಜೀವನ ಪ್ರವೃತ್ತಿ (Life Instinct).

ಪುರಾಣಪ್ರತೀಕಗಳನ್ನೂ, ಧಾರ್ಮಿಕ ಆಚರಣೆಗಳನ್ನೂ ಬಹಳ ಅಭ್ಯಾಸ ಮಾಡಿ ತನ್ನ ಸಾಮೂಹಿಕ ಅಜ್ಞಾತ (Collective Unconsious) ಎಂಬ ಸಾರ್ವಕಾಲಿಕ ತತ್ತ್ವವನ್ನು ಪ್ರತಿಪಾದಿಸಿದ ಕಾರ್ಲಯೂಂಗರು ಬಹಳ ಪ್ರಸಿದ್ಧರು. ಅವರು ಅನೇಕ ಪುರಾಣ ಕಥೆಗಳಿಗೆ ಮಾಡಿದ ವಿವರಣೆಗಳು ಚರ್ಚಾಸ್ಪದವಾಗಿವೆ. ಅವುಗಳ ಉಗಮಗಳಿಗೆ ಅವರು ಕೊಟ್ಟ ಕಾರಣಗಳು ಪುರಾಣಕಥೆಗಳಂತೆ ಕಾಲ್ಪನಿಕಗಳಾಗಿ ಕಾಣುತ್ತವೆ. ಆದರೆ ಅವರು ಕೊಟ್ಟ ಹಲವು ಹಿನ್ನೆಲೆಗಳು ಸ್ಥೂಲವಾಗಿ ಮಾರ್ಮಿಕವಾಗಿದ್ದು ಕೆಲವು ವಿವರಗಳಲ್ಲಿ ಕಾಲ್ಪನಿಕತೆ ಕಾಣುತ್ತದೆ.

ಪುರಾಣಕಥೆಗಳು ಎಷ್ಟೇ ವಿಚಿತ್ರವಾದರೂ ಅರ್ಥಹೀನವಲ್ಲ. ಅಲ್ಲದೇ ಒಂದೇ ದೃಷ್ಟಿಯಿಂದ ವಿಚಾರಮಾಡಿದರೆ

ಅವುಗಳ ಸಂಪೂರ್ಣ ಅರ್ಥವಿವರಣೆ ಸಾಧ್ಯವಿಲ್ಲ. ಬಹುತರ-ವಾಗಿ ಅವು ಸಂಕೀರ್ಣವಾಗಿವೆ; ಜಟಿಲವಾಗಿವೆ.

ಕಾರ್ಲಯೂಂಗರು ಮಾನವನ ಅಜ್ಞಾತ ಮನಸ್ಸು ತೀರ ಪ್ರಾಚೀನಕಾಲದ ಭಾವನಾಸ್ತರಗಳನ್ನು ಒಳಗೊಂಡಿದೆಯೆಂದೂ ಬಾಲ್ಯದಲ್ಲಿ ಹತ್ತಿಕ್ಕಿದ ಸಂಗತಿಗಳ ವಿವರಣೆಯಿಂದ ಫ್ರಾಯ್ಡರ ಮನೋವಿಶ್ಲೇಷಣಾತ್ಮಕ ಚಿಕಿತ್ಸೆಯನ್ನು ಕೈಕೊಂಡುದು ಸಾಲದೆಂದು ಅನುಭವಪಟ್ಟು ತಮ್ಮ ಸಾಮೂಹಿಕ ಅಜ್ಞಾತ ಸಿದ್ಧಾಂತವನ್ನು ಪ್ರಚಾರದಲ್ಲಿ ತಂದರು. ಅನೇಕ ಆರ್ಯಭಾವ ರೂಪಗಳು (Archetype) ಇಂದಿನ, ಹಿಂದಿನ, ಎಂದಿನ ಮಾನವರೆಲ್ಲರಿಗೂ ಸಾಮಾನ್ಯವಾಗಿ ಇರುವ ಮಾನಸಿಕ ಅವ-ಯವ (Psychic organ) ವೆಂದೂ ಅವರು ತಿಳಿಸಿದ್ದಾರೆ. ಆರ್ಯ (ಪ್ರಾಚೀನ) ಭಾವಗಳೊಡನೆ ಐಕ್ಯವನ್ನು ಸಾಧಿಸುವ ಉದ್ದೇಶದಿಂದ ಮಾನವನು ಬೇರೆ ಬೇರೆ ಪ್ರಾಣಿಪ್ರತೀಕ (Animal Symbols) ಗಳನ್ನು ಉಪಯೋಗಿಸುವನೆಂದು ಅವರು ಬರೆಯುತ್ತಾರೆ. ನಿಮ್ನ ವರ್ಗದ ಬೆನ್ನುಹುರಿಯುಳ್ಳ ಪ್ರಾಣಿ (Lower vertebrates)ಗಳ ಪ್ರತೀಕಗಳು ಸಾಮೂಹಿಕ ಮಾನಸಿಕ ಸ್ತರದ ಪ್ರತೀಕವಾಗಿ ಬರುವವೆಂದೂ ಸರ್ಪದ ಪ್ರತೀಕವು ಈ ಪ್ರಾಚೀನ ಸ್ತರವನ್ನು ಪ್ರತಿನಿಧಿಸುತ್ತದೆಯೆಂದೂ ಅವರು ವಿವರಿಸುತ್ತಾರೆ. ಜಾಗ್ರತಮನಸ್ಸು ಸ್ವಾಭಾವಿಕ ಪ್ರವೃತ್ತಿಗಳಿಂದ ದೂರವಾದಾಗ ಸಾಮಾನ್ಯವಾಗಿ ಸರ್ಪಗಳು ಸ್ವಪ್ನದಲ್ಲಿ ಕಾಣುತ್ತವೆ.

ಸರ್ಪವು ಪರೆಯನ್ನು ಕಳಚಿ ಹೊಸ ಚರ್ಮವನ್ನು ಪಡೆಯುತ್ತದೆ. ಅದರಿಂದ ಅದು ಪುನರ್ನವೀಕರಣದ

ಪ್ರತೀಕವಾಗುತ್ತದೆ. ಸರ್ಪಪ್ರತೀಕವು ಮನುಷ್ಯನು ಪ್ರಾಣಿಗಳಿಂದ ವಿಕಾಸಹೊಂದಿದ ಅವಸ್ಥೆಯ ಭೂತಕಾಲಕ್ಕೆ (ಮಾನಸಿಕವಾಗಿ) ಅವನನ್ನು ಕೊಂಡೊಯ್ಯುತ್ತದೆ. ಅದರಿಂದಲೇ ಅನೇಕ ಭೂತಗಳಿಗೆ ಬೇರೆಬೇರೆ ಪ್ರಾಣಿಗಳ ಮೋರೆಗಳುಂಟು !) ಅನೇಕ ಪ್ರಾಕ್ತನಜನಾಂಗ (Primitive people) ಗಳವರು ನೃತ್ಯಗಳನ್ನು ಕೈಕೊಳ್ಳುತ್ತಾರೆ. ಮಧ್ಯ ಆಸ್ಟ್ರೇಲಿಯಾದ ಮೂಲ ನಿವಾಸಿಗಳು ಆಗ ಹಳೆಯ ಕಾಲದ ಪುರಾಣಪಿತೃಗಳೇ ತಾವೆಂಬುದಾಗಿ ಅಭಿನಯಮಾಡುತ್ತಾರೆ. ಟಾವ್ಹೋಸಿನ ಪ್ಯೂಬ್ಲೊ ಇಂಡಿಯನ್ನರು ತಾವು ಪ್ರಾಣಿಪಿತೃಗಳೆಂದೂ (ಮೀನಗಳೆಂದೂ) ಸೂರ್ಯನೆಂದೂ ಈ ನೃತ್ಯಗಳಲ್ಲಿ ಅಭಿನಯಿಸುತ್ತಾರೆ (ಪ್ರಾಣಿಗಳು ತಮ್ಮ ಪಿತೃಗಳೆಂದು ಹೇಳುವ ಬಳಿ ಸಂಪ್ರದಾಯಕ್ಕೆ ಇಲ್ಲಿ ವಿವರಣೆ ದೊರೆಯಬಹುದು).

ಈ ವಿಧಿಕ್ರಮಗಳಿಂದ ಅಜ್ಞಾತಮನಸ್ಸಿನೊಡನೆ (Unconscious) ಸಮನ್ವಯ (Integration) ಸಾಧ್ಯವಾಗುತ್ತದೆ. ಮಾನವನ ಮೂಲಪ್ರವೃತ್ತಿ (Instincts) ಗಳಿಗೂ ಅವನ ವೈಯಕ್ತಿಕ ಪರಿಸ್ಥಿತಿಗೂ ಐಕ್ಯವನ್ನು ಸಾಧಿಸುವುದೇ ಇವುಗಳ ಗುರಿಯಾಗಿದೆಯೆಂದು ಯೂಂಗರು ವಿವರಿಸುತ್ತಾರೆ. ಈ ರಹಸ್ಯವನ್ನು ಅಭಿವ್ಯಕ್ತಗೊಳಿಸಲು ಪ್ರಾಚೀನ ಜ್ಞಾನಿಗಳು ರೂಪಕ (Allegory) ದ ಭಾಷೆಯನ್ನು ಬಳಸುತ್ತಿದ್ದರು. (ಇಬಿಸ್ ಹಕ್ಕಿಯೆಂದೂ ಇದೆ) ಮಾನವನಿಗಿಂತಲೂ ಕೆಳಮಟ್ಟದ ಇಜಿಪ್ತದ ಥೋತ್ ದೇವನ ರೂಪ ಬಬೂನ್ ಮಂಗನದು (Subhuman) ಮನಸ್ಸಿನ ಭಾಗಕ್ಕೆ ಇದು ಸಮರ್ಪಕವಾದ

ಪ್ರತೀಕವಾಗಿದೆ. (ಎಲ್ಲ ಪ್ರಾಣಿದೇವತೆಗಳಿಗೂ ಈ ವಿವರಣೆ ಯನ್ನು ಹೇಳಬಹುದು).

ವೀರಕಥೆಯಲ್ಲಿನ ನಾಯಕನ ಮುಖ್ಯಕಾರ್ಯ ಕತ್ತಲೆಯ ದೈತ್ಯ (ಸರ್ಪರೂಪವಿರುವ) ನನ್ನು ಹತ್ತಿಕ್ಕುವುದು. ಕತ್ತಲೆಯು ಅಜ್ಞಾತ ಮನಸ್ಸಿನ ಪ್ರತೀಕ. ಅದನ್ನು ವೀರನು ಗೆದ್ದು ಅಮರತ್ವ ಪಡೆಯುವ ಕಥೆಗಳು ಸಾಮಾನ್ಯವಾಗಿವೆ. (ಇದು ಅತಿಮಾನವ ರಿಂದಲೇ ಸಾಧ್ಯ) ಡಾಯೊನಿಸಸ್, ಒರ್ಫಿಯಸ್, ಹರ್ಕ್ಯುಲಸ್ ಮುಂತಾದ ವೀರರು ಅಮರತ್ವವನ್ನು ಪಡೆಯುತ್ತಾರೆ. ಇಲ್ಲಿ ಜ್ಞಾತಮನಸ್ಸು ಅಜ್ಞಾತಮನಸ್ಸನ್ನು ಗೆಲ್ಲುವುದೇ ಅಮರತ್ವ. ಸಮುದ್ರವು ಅಜ್ಞಾತಮನಸ್ಸಿನ ಪ್ರತೀಕ. ಅರೆಸ್ಲುಯಸನ ಕಥೆ ಯಲ್ಲಿ ರಾಜನು ಅವನನ್ನು ಮುಮ್ಮೂಲೆಯ ಕನ್ನಡಿಯ ಮನೆ ಯಲ್ಲಿಟ್ಟು ಸಮುದ್ರದ ತಳದಲ್ಲಿ ಬಿಡುತ್ತಾನೆ. ಈ ಅಜ್ಞಾತ ಮನಸ್ಸಿನ ಸಮುದ್ರದ ಕತ್ತಲೆಯೇ ಸಾವು. ಆ ಸಾವಿನಲ್ಲಿ ಹೊಸ ಮನಸ್ಸಿನ ಭಾವ, ಜನ್ಮಪಡೆಯುವ ಭಾವನೆಗಳೇ ಅಲ್ಲಿಂದ ಎದ್ದು ಬರುವ ಅರೆಸ್ಲುಯುಸ್ ಮತ್ತು ಅವನ ಸಂಗಡಿಗರು ಎಂದು ಯೂಂಗರು ಹೇಳುವಂತೆ ಕಾಣುತ್ತದೆ.

ವೀರ ಪುರಾಣ ಕಥೆಗಳಲ್ಲಿ ತರುಣ ಸುಂದರಿಯನ್ನಾಗಲಿ, ಸಂಪತ್ತನ್ನಾಗಲಿ ಪಡೆಯಲು (ಸಮುದ್ರದಾಳ, ಗುಹೆ, ಅಡವಿ, ನಡುಗಡ್ಡೆ, ಕೋಟೆ ಇತ್ಯಾದಿ) ಗಂಡಾಂತರಪ್ರದೇಶಗಳಿಗೆ ಹೋಗಿ ಅಸಾಧ್ಯ ಕಾರ್ಯಗಳನ್ನು ಸಾಧ್ಯಮಾಡುವ ಕಥಾವಸ್ತುವಿದೆ. ಆದರೆ ಇಲ್ಲಿ ತನ್ನ ಮನಸ್ಸಿನಾಳದಲ್ಲಿ ಆಳವಾಗಿ ವಿಚಾರ ಮಾಡುವ ಪ್ರತಿಯೊಬ್ಬನಿಗೂ ಪಾತಾಳಕ್ಕೆ (Hades) ಪ್ರಯಾಣ ಮಾಡುವ ಪೆದರಿಕೆಯಾಗುತ್ತದೆಯೆಂದು ಅವರು

ಹೇಳುವುದು ಕಾವ್ಯಕಲ್ಪನೆಯಂತೆ ಕಾಣುತ್ತದೆ. (ಅಜ್ಞಾತ ಮನಸ್ಸಿನ ಅನೈತಿಕ ಭಾವನೆಗಳ ಅರಿವು ನರಕದ ಹೆದರಿಕೆಯನ್ನುಂಟುಮಾಡುತ್ತದೆ ಎಂಬ ಅಭಿಪ್ರಾಯ ಇಲ್ಲಿರಬಹುದು.) ಸತ್ತವರ ಲೋಕಕ್ಕೆ ಹೋಗಿಬಂದ ಸಾಹಸದ ಕಥೆಗಳಿಗೂ, ಸ್ವರ್ಗಕ್ಕೆ ಹೋದವರ ಕಥೆಗಳಿಗೂ ಸಾವಿನ ಭೀತಿಯಿಂದ ಪಾರಾಗುವ ಇಚ್ಛಾಪೂರ್ತಿ (Wish fulfilment)ಯ ಆಸೆ ಕಾರಣವೆಂದೆನಿಸುತ್ತದೆ. ಎಚ್ಚೆತ್ತ ಕಾಲದಲ್ಲಿನ ಚಿತ್ರಕಲ್ಪನೆಗಳು (Conscious Phantasies) ಪುರಾಣ ಕಲ್ಪನೆಯ ಅಥವಾ ವಿಕಾಸಹೊಂದದ ಅಸ್ಪಷ್ಟವಾದ ಆಸೆಗಳ ಪ್ರವೃತ್ತಿಗಳನ್ನು ನಿರೂಪಿಸುತ್ತವೆಯೆಂದು ಯೂಂಗರೇ ತಮ್ಮ 'ಅಜ್ಞಾತಮನಸ್ಸಿನ ವಿಜ್ಞಾನ' ಎಂಬ ಗ್ರಂಥದಲ್ಲಿ ಬರೆದುದುಂಟು.

ಮಾನವನ ಮನಸ್ಸಿನಲ್ಲಿ 'ಲಿಬಿಡೋ' ಮುಖ್ಯವಾದದ್ದು. ಫ್ರಾಯ್ಡರ ಪ್ರಕಾರ 'ಲಿಬಿಡೋ' ಕಾಮ. (ಕೊನೆಕೊನೆಗೆ ಆ ಸಂಕುಚಿತ ಅರ್ಥವನ್ನು ವಿಸ್ತರಿಸುವ ವಿಚಾರ ಫ್ರಾಯ್ಡರಿಗೂ ಅಗತ್ಯವೆನಿಸಿತ್ತು ಎಂದು ಯೂಂಗರು ಬರೆದಿದ್ದಾರೆ.) ಯೂಂಗರ ಅಭಿಪ್ರಾಯದಲ್ಲಿ ಲಿಬಿಡೋ ವಿಶ್ವವ್ಯಾಪಿಯಾದ ಪ್ರಾಣಶಕ್ತಿ. ಲಿಂಗವು ಸರ್ವವ್ಯಾಪಿಯಾದ ಕ್ರಿಯಾತ್ಮಕ ಶಕ್ತಿ. ಪವಾಡಗಳನ್ನು ಮಾಡುವಂಥದು. ಧಾರ್ಮಿಕವೀರರ ಮೂಲ ಅರ್ಥ ಮಾನವನ ಪ್ರಾಣಶಕ್ತಿ (ಲಿಬಿಡೊ) ಯ ವ್ಯಕ್ತಿರೂಪ (Personification). ಹೆಫೆಸ್ಟಸ್ ಮುಂತಾದ ಕುಬ್ಜದೇವತೆಗಳು ಈ ಶಕ್ತಿಯ ಪ್ರತೀಕಗಳು.

ಬೆಂಕಿಯನ್ನು ಕದ್ದು ತಂದು ಮಾನವರಿಗೆ ಕೊಟ್ಟ ಪ್ರೊಮಿಥಿಯಸ್ ಮೂಲದಲ್ಲಿ 'ಪ್ರಮಂಥ' ಎಂಬ ಅಗ್ನಿಯನ್ನುರಿಸುವ ಕಟ್ಟಿಗೆಯ ಉಪಕರಣ. "Promathyus" ಎಂಬ ಗ್ರೀಕ ಶಬ್ದದ ಒಂದು ಅರ್ಥ ಕಳ್ಳ (Robber) ಎಂದಿದೆ. ಇನ್ನೊಂದು ಅರ್ಥ ತಿಕ್ಕುವವ (Rubber) (ಈ ವಿವರಣೆ ತುಂಬ ಮಾರ್ಮಿಕವಾಗಿದೆ. ಯಾಕೆಂದರೆ ಕಟ್ಟಿಗೆಯನ್ನು ತಿಕ್ಕುವದು ಅಥವಾ ತಿರುಗಿಸುವುದರಿಂದ ಬೆಂಕಿ ಹುಟ್ಟುತ್ತದೆ. ಮತ್ತೊಂದು ಅರ್ಥದಿಂದ ದೇವತೆಗಳು ಉಪಯೋಗಿಸುವ ಬೆಂಕಿಯನ್ನು ಪ್ರೊಮಿಥಿಯಸನು ಕದ್ದು ತಂದು ಬೆಂಕಿಯ ಉಪಯೋಗ ತಿಳಿಯದ ಮಾನವರಿಗೆ ಕೊಟ್ಟನು ಎಂಬ ಕಥೆ ರೂಪಗೊಂಡಿದೆ.) 'ಪ್ರಮಂಥ'ದಲ್ಲಿ ಮೇಲಿನ ಕಟ್ಟಿಗೆಯ ಕೋಲು ಪುರುಷತತ್ವ. ಕೆಳಗಿನ ಪೀಠ ಸ್ತ್ರೀತತ್ವ. ಅನೇಕ ಆಚರಣೆಗಳು ಶಿಷ್ಟಾಚಾರಕ್ಕೆ ಅಸಂಗತವಾದರೂ ಧಾರ್ಮಿಕ ಆಚರಣೆಗಳೆಂದು ಒಪ್ಪಿತವಾಗಿದ್ದವು (ವಿವರಗಳನ್ನು ನಿರುಪಾಯವಾಗಿ ಬಿಡಬೇಕಾಯಿತು).

ಬೃಹದಾರಣ್ಯಕ ಉಪನಿಷತ್ತಿನ ಸೃಷ್ಟಿಕಥೆಯನ್ನು ಯೂಂಗರು ಎತ್ತಿಕೊಂಡಿದ್ದಾರೆ. ಆತ್ಮವು ಓರ್ವ ಸ್ತ್ರೀ, ಮತ್ತು ಓರ್ವ ಪುರುಷನಷ್ಟು ದೊಡ್ಡದಾಗಿತ್ತು. ಆಮೇಲೆ ತನ್ನನ್ನೇ ದ್ವಿಭಾಗ ಮಾಡಿಕೊಂಡು ಪ್ರತ್ಯೇಕ ಪುರುಷ ಹಾಗೂ ಸ್ತ್ರೀ ರೂಪಗಳನ್ನು ಪಡೆಯಿತು. ಪುರುಷನು ಸ್ತ್ರೀ ಸಂಯೋಗಮಾಡಲು ಮಾನವ ಸಂತತಿಯ ಉದಯವಾಯಿತು. ಸ್ತ್ರೀಯು ತನಗೆ ಜನ್ಮವಿತ್ತವನೇ ಹೀಗೆ ಮಾಡಿದುದು ಸರಿಯಲ್ಲವೆಂದು ಆಕಳಿನ ರೂಪದಲ್ಲಿ ಓಡಿಹೋದಳು. ಪುರುಷನು ಎತ್ತಾಗಿ ಆಕಳನ್ನು

ಕೊಡಲು ದನಗಳ ಸಂತತಿಯಾಯಿತು. ಆಕೆಯು ಹೆಣ್ಣು ಕುದುರೆಯಾಗಲು ಗಂಡು ಕುದುರೆಯಾಗಿ ಅವನು ಕೂಡಿದನು. ಕುದುರೆಗಳ ಜನನವಾಯಿತು.... ಇತ್ಯಾದಿ.

ಈ ಕಥೆಯ ಮನೋವೈಜ್ಞಾನಿಕ ವಿವರಣ ಹೀಗಿದೆ: ಆತ್ಮ ಲಿಬಿಡೋ. ಪ್ರಾರಂಭದಲ್ಲಿ ಅದು ಸ್ತ್ರೀ-ಪುರುಷಭೇದವಿಲ್ಲದ ದ್ವಿಲಿಂಗಿಯ ಅವಸ್ಥೆಯಲ್ಲಿತ್ತು. ಆ ಮೇಲೆ ಪುರುಷ ಮತ್ತು ಸ್ತ್ರೀಯ ವಿಭಿನ್ನತೆಯ ಅರಿವಾಯಿತು.

ಯೂಂಗರ ವಿವರಣೆಯಲ್ಲಿ ಸೂರ್ಯನು ಲಿಬಿಡೋದ ಸಂಕೇತವಾಗುತ್ತಾನೆ. (ಸೂರ್ಯನು ಲೋಕಕ್ಕೆ ಪ್ರಾಣಶಕ್ತಿಯನ್ನು ಕೊಡುವ ಚೈತನ್ಯದ ಭಂಡಾರ.) ಸೂರ್ಯನು ಭೂಮಿತಾಯಿಯ ಗರ್ಭವನ್ನು ಮರಳಿ ಪ್ರವೇಶಿಸಿ ಮರುದಿನ ಪುನಃ ಬರುತ್ತಾನೆ ಎಂಬ ಕಲ್ಪನೆಯನ್ನೂ ಅವರು ವಿಚಾರ ಮಾಡಿದ್ದಾರೆ. (ಶಿಸು ತಾಯಿಯ ಗರ್ಭಕೋಶದಲ್ಲಿ ಹಾಯಾಗಿ ಇದ್ದ ಕಾಲದ ಹಿನ್ನೆನಪು ಮೋಕ್ಷದ ಆಸೆಯನ್ನು ಪ್ರಚೋದಿಸುತ್ತದೆಯೆಂಬ-ಅಭಿಪ್ರಾಯವೂ ಉಂಟು.)

ವಿನಾಶಕಾರಿಯಾದ ಮಾತೃದೇವತೆಯ ಕಲ್ಪನೆಯನ್ನು ಯೂಂಗರು ವಿಚಾರ ಮಾಡಿದ್ದಾರೆ. ಲಾಮಿಯಾ ಎಂಬ ದೇವತೆ ಜ್ಯೂಸ್ ದೇವನನ್ನು ಮೋಹಗೊಳಿಸಿದ್ದರಿಂದ ಅಸೂಯೆ ಹೊಂದಿದ ಹೀರಾದೇವಿಯು ಲಾಮಿಯಾ ಸತ್ತ ಶಿಸುಗಳಿಗೆ ಜನ್ಮಕೊಡುವಂತೆ ಮಾಡಿದಳು. ಅದರಿಂದ ಕ್ರೂರಳಾದ

ತಾಯಿಯೂ ಶಿಸುಗಳನ್ನು ನಾಶಮಾಡುವ ಭೀಕರ ರಾತ್ರಿದೇವತೆ ಯಾಗುತ್ತಾಳೆ. ಬೆಬಿಲೋನಿಯದ ಸೃಷ್ಟಿಕಥೆಯಲ್ಲಿಯ ಟಿಯಾ ಮತ್ ಎಂಬ ಸಮುದ್ರ (ಸರ್ಪ) ದೇವತೆಯನ್ನು ಮರ್ದೂಕ್ ದೇವನು ಕೊಂದು ಅವಳ ಹೆಣದಿಂದ ಜಗತ್ಸೃಷ್ಟಿಯನ್ನು ಮಾಡುತ್ತಾನೆ. (ಸಮುದ್ರವನ್ನು ಸರ್ಪಪ್ರತೀಕವಾಗಿ ಮಾಡು-ವುದು ಪುರಾಣ ಕಥೆಗಳಲ್ಲಿ ಸಾಮಾನ್ಯವಾಗಿದೆ. ಆದಿಶೇಷನ ಸಾವಿರ ಹೆಡೆಗಳು ತೆರೆಗಳ ಸೂಚಕ.) ಇಲ್ಲಿಯ ಟಿಯಾಮತ್ ಭೀಕರ ಮಾತೃದೇವತೆ. ಕತ್ತಲೆಯ ಸರ್ಪವನ್ನು ಗೆಲ್ಲುವುದು ಹೀನ ಅಪರಾಧ ಮಾಡಿದ ತಾಯಿಯನ್ನು ಗೆಲ್ಲುವುದು. ಗ್ರೀಕರ ಪುರಾಣಕಥೆಯ ಸರ್ಪ ಟ್ಯಾಪ್ಸೋನ್ ಸಹ ಭೀಕರಮಾತೆಯೇ ಸರಿ.

ಈಡಿಪಸ್‌ನ ಕಥೆಯಲ್ಲಿ ಥೀಬ್ಸಿನ ಜನರನ್ನು ಹಾಳು ಮಾಡಲು ಹೀರಾದೇವಿ ಸ್ಫಿಂಕ್ಸ್ (ಹೆಂಗಸಿನ ತಲೆ, ಸಿಂಹದ ದೇಹ, ಸರ್ಪದ ಬಾಲ ಹಾಗೂ ಗರುಡನ ರೆಕ್ಕೆಗಳುಳ್ಳ ಪುರಾಣ ಪ್ರಾಣಿ) ಎಂಬ ಕ್ರೂರ ಪ್ರಾಣಿಯನ್ನು ಕಳಿಸುತ್ತಾಳೆ. ಆ ಸ್ಫಿಂಕ್ಸ್ ಈಡಿಪಸ್‌ನಿಗೆ ಹಾಕಿದ ಒಗಟು ಇದು; "ಒಂದೇ ಧ್ವನಿಯಿದ್ದರೂ ಕೆಲವೊಮ್ಮೆ ಎರಡು ಕಾಲು, ಕೆಲವೊಮ್ಮೆ ಮೂರು, ಕೆಲವೊಮ್ಮೆ ನಾಲ್ಕು ಕಾಲುಗಳಿದ್ದು ಎಲ್ಲವನ್ನೂ ಪಡೆದಾಗ ಅತಿ ದುರ್ಬಲವಾಗುವದಾವುದು?" ಈಡಿಪಸ್ ಕೊಟ್ಟ ಉತ್ತರ: "ಮನುಷ್ಯ. ಹೇಗೆಂದರೆ ಶಿಸುವಾಗಿದ್ದಾಗ ನಾಲ್ಕು ಕಾಲುಗಳಿಂದ ಹರಿದಾಡುತ್ತಾನೆ. ತಾರುಣ್ಯದಲ್ಲಿ ಎರಡು ಕಾಲುಗಳ ಮೇಲೆ ಗಟ್ಟಿಯಾಗಿ ನಿಲ್ಲುತ್ತಾನೆ. ಮುಪ್ಪಿ-

ನಲ್ಲಿ ದೊಣ್ಣೆಯ ಮೇಲೆ ಭಾರ ಹಾಕುತ್ತಾನೆ." ಈ ಸರಿಯಾದ ಉತ್ತರ ಕೇಳಿ ಸ್ಫಿಂಕ್ಸ್ ಕಂದಕದಲ್ಲಿ ಹಾರಿಕೊಂಡು ಸತ್ತಳು. ಯೂಂಗರ ಅಭಿಪ್ರಾಯದಲ್ಲಿ ಸ್ಫಿಂಕ್ಸ್ ಭೀಕರ ಮಾತೆಯ ಪ್ರತೀಕ. ಈಡಿಪಸ್ ಸ್ಫಿಂಕ್ಸ್‌ನ್ನು (ಹೆದರಿಕೆಯನ್ನು) ಗೆದ್ದುದರಿಂದ ತಾಯಿ ಜೊಕಾಸ್ಟಾಳನ್ನು ಮದುಯಾಗಬೇಕಾಯಿತು ಎಂದು ಅವರು ವಿವರಿಸುವದು ಸರಿಯಲ್ಲ. ಯಾಕೆಂದರೆ ಜೊಕಾಸ್ಟಾ ತಾಯಿಯೆಂದು ಈಡಿಪಸ್‌ನಿಗೆ ಮದುವೆಯಾಗುವಾಗ ಗೊತ್ತಿರುವುದಿಲ್ಲ. (ರಾಬರ್ಟ್‌ಗ್ರೇವ್ಸ್‌ರು ಅದು ಕೆಲೆಂಡರ್ ಪ್ರತೀಕ ಥೀಬ್ಸಿನ ಚಂದ್ರದೇವತೆಯ ವರ್ಷದ ಎರಡು ಭಾಗಗಳನ್ನು ಸೂಚಿಸುತ್ತದೆ ಎಂದಿದ್ದಾರೆ. ಆದರೆ ಈಡಿಪಸ್‌ನ ಕಥೆಯಲ್ಲಿ ಇದರ ಔಚಿತ್ಯ ಕಾಣುವುದಿಲ್ಲ. ಚಿಮೆರಾ (Chimera) ಎಂಬ ಪುರಾಣಪ್ರಾಣಿಯು ತಲೆ ಸಿಂಹದ್ದು: ಶರೀರ; ಆಡಿನದ್ದು, ಬಾಲ ಸರ್ಪದ್ದು. ಈಮೂರು ಭಾಗಗಳು ಸ್ವರ್ಗದ ರಾಣಿಯ ಪವಿತ್ರ ವರ್ಷದ ಮೂರು ಋತುಗಳು ಎಂದು ರಾಬರ್ಟ ಗ್ರೇವ್ಸ್ ವಿವರಿಸಿದ್ದಾರೆ.)

"ಮೆಡ್ಯೂಸಾ ಎಂಬ ಭೀಕರ ಗೋರ್ಗೋನ್ ದೇವತೆ, ಸ್ಫಿಂಕ್ಸ್, ಕೆಂಟಾರನು, ಚಿಮೆರಾ ಇವೆಲ್ಲ ಯೂಂಗರ ಸಾಮೂಹಿಕ ಅಜ್ಞಾತ ಮನಸ್ಸಿನಿಂದ ದಿಗ್ಗನೆ ಎದ್ದು ಬಂದ ಕುರುಡು ಸೆಳವುಗಳಲ್ಲ. ಪುರಾಣ ಕಥೆಗಳ ವಿವರಣೆಯನ್ನು ಇತಿಹಾಸ ಹಾಗೂ ಪುರಾಣ ಕಥೆಗಳ ದೃಷ್ಟಿಯಿಂದ ವಿವರಿಸುವುದೇ ಸಮಂಜಸ"ವೆಂದೂ ರಾಬರ್ಟ ಗ್ರೇವ್ಸರು ಬರೆದಿದ್ದಾರೆ. ಇವರಲ್ಲಿ ತಥ್ಯವಿದೆ. ಆದರೆ ಭೂಗರ್ಭಶಾಸ್ತ್ರದ ಸಹಾಯವನ್ನು ಇತಿಹಾಸ ವಿವರಣವನ್ನೂ ತೆಗೆದುಕೊಂಡು ಪುರಾಣದ ಕೆಲವು ಮಟ್ಟಿನ

ಸತ್ಯವನ್ನು ಕಾಣಬಹುದು. ಆದರೆ ಇಷ್ಟರಿಂದಲೇ ಪುರಾಣ ಕಥೆಗಳ ವಿವರಣೆ ಮುಗಿಯಲಿಲ್ಲ. ಕೊನೆಗೆ ಈ ಕಲ್ಪನೆಗಳ ಉಗಮಸ್ಥಾನ ಮಾನವನ ಮನಸ್ಸೇ ಎಂಬುದನ್ನು ಮರೆಯುವಂತಿಲ್ಲ. ಮಾನವರ ಆಸೆ, ಆಕಾಂಕ್ಷೆಗಳು ಸಾಮಾಜಿಕ ರೀತಿ-ನೀತಿಗಳ ಮೇಲೆ ಪರಿಣಾಮ ಮಾಡುತ್ತವೆ. ಅಜ್ಞಾತ ಹಾಗೂ ಜ್ಞಾತ ಮನಸ್ಸುಗಳೆರಡರಲ್ಲಿನ ಹತ್ತಿಕ್ಕಿದ ಅಥವಾ ಸುಪ್ತವಾದ ಇಲ್ಲವೆ ಜಾಗ್ರತಾವಸ್ಥೆಯ ಚಿತ್ರಕಲ್ಪನೆಗಳೇ ಪುರಾಣ ಕಲ್ಪನೆಗಳ ಮೂಲವೆನ್ನುವುದು ವಿಶಾಲಾರ್ಥದಲ್ಲಿ ಸರಿಯಾಗಿದೆ.

(ಪ್ರಾಣಿಪ್ರತೀಕಗಳಲ್ಲಿ ಹಲವು ಸ್ವಪ್ನಗಳ ಅನುಭವಗಳಿಂದ ಉಂಟಾಗುವದು ಸಾಧ್ಯವಿದೆ. ಬೇಂದ್ರೆಯವರ 'ಸಿಂಹ ಮುಖಕ್ಕಿದೆ ನವಿಲಿನ ಸೋಗೆ। ಶಕ್ತಿಶಾರದೆಯ ಮೇಳದ ಹಾಗೆ॥' ಎಂಬ ಕಲ್ಪನೆ ಸ್ವಪ್ನದಿಂದ ಮೂಡಿದುದು).

ಮಾನವನ ಮನಸ್ಸು ತಪ್ಪು ಕಲ್ಪನೆ ಮಾಡಿದರೂ ಪುರಾಣ ಕಥೆಗಳು ಮೂಡುತ್ತವೆ. ಒಂದು ಜಾತಿಯ ಸಸ್ತನಿ ಮೀನು ನೀರಿನ ಮೇಲೆ ಎದ್ದು ಬರುವದರಿಂದ ಜಲಕನ್ಯೆಯರ ಭ್ರಮೆಯುಂಟಾಗುತ್ತದೆ.

ಗ್ರೀಕರು, ಶಕ್ತಿ, ಕರುಣೆ, ನಾಚಿಕೆ, ಲೋಕವಾರ್ತೆ, (Rumour) ಅನುನಯ ಇತ್ಯಾದಿ ಅಮೂರ್ತ ವಿಚಾರಗಳಿಗೂ ದೇವತ್ವವನ್ನು ಕಲ್ಪಿಸಿ ಪೂಜಿಸುತ್ತಿದ್ದರು. ಅದರಿಂದ ಸಾಂಕೇತಿಕವಾಗಿ ಮನೋವೈಜ್ಞಾನಿಕ ಸತ್ಯವನ್ನೂ ಪ್ರಾಚೀನರು ಅನೇಕ

ಪುರಾಣಕಥೆಗಳ ರೂಪದಲ್ಲಿ ಹೇಳಿದ್ದರೆ ಆಶ್ಚರ್ಯವಿಲ್ಲ. ಮನುಷ್ಯನ ಪ್ರಾಕೃತಿಕ ಭಾವನೆಗಳನ್ನು ವಿವರಿಸುವಲ್ಲಿ ಆಡಿನ ಕೋಡು, ಬಾಲ, ಗೊರಸುಳ್ಳ ಪಾನ್ ದೇವನ ಕಲ್ಪನೆಯನ್ನು ಗ್ರೀಕರು ಮಾಡಿದ್ದಾರೆ. ಪ್ರಾಕೃತಿಕ ಕಾಮಭಾವನೆಯ ಸಂಕೇತವೂ ಈ ದೇವನ ಕಲ್ಪನೆಯಲ್ಲಿದೆ.

ಹಾರುವ ಕುದುರೆಗಳು, ಸರ್ಪಗಳ ಕೂದಲುಗಳುಳ್ಳ ಭೀಕರ ಗೋಗೊರ್ನ್. ಸ್ತ್ರೀ ದೇವತೆಗಳು. ಕೆಂಟಾರರು ಮಾನವನ ಮನಸ್ಸಿನಲ್ಲಿ ಮೂಡಿದ ಚಿತ್ರಕ ಕಲ್ಪನೆಗಳು ಎಂದು ಪ್ಲೇಟೋ ಹೇಳಿದ ಅಭಿಪ್ರಾಯವನ್ನು ದೇಲಿಷೇಯುವರು ಅಂಗೀಕರಿಸಿದ್ದಾರೆ. ಹಾಗೆಯೇ ಜ್ಯೂಸ್ ಹಾಗೂ ಇತರ ದೇವತೆಗಳ ಹಲವು ಅಸಭ್ಯವರ್ತನೆಗಳು ಆ ದೇವತೆಗಳನ್ನು ಲೇವಡಿ ಮಾಡುವ ಉದ್ದೇಶದಿಂದ ಸೃಜಿಸಿದ ಕಥೆಗಳೆಂಬ ಅಭಿಪ್ರಾಯವೂ ಉಂಟು. ಆದ್ದರಿಂದ ಈ ಪುರಾಣಕಥೆಗಳ ಉಗಮವು ಹೀಗೆಯೇ ಆಗಿದೆಯೆಂದು ಹಟ ಹಿಡಿಯುವುದು ಸಾಧ್ಯವಿಲ್ಲ. ಆದರೆ ಇವುಗಳ ಅರ್ಥಗಳನ್ನು ವಿವರಿಸುವಲ್ಲಿ ಮಾನವನ ಕಲ್ಪನಾಸಂಪತ್ತಿನ ಶ್ರೀಮಂತಿಕೆಯ ವಿಲಾಸವನ್ನು ಕಾಣಬಹುದು. ಅಲ್ಲದೆ ಹೊಸ-ಹೊಸ ಸತ್ಯಗಳನ್ನು, ತತ್ವಗಳನ್ನು ಸಾಂಕೇತಿಕವಾದ ಈ ಕಥೆಗಳಿಂದ ಮಥನಮಾಡಿ ನೂತನವಾದ ಉಪಯೋಗಗಳಿಗೆ ಇವನ್ನು ಒಳಪಡಿಸಬಹುದು. ಹಿಂದಿನವರ ಕಲ್ಪನೆಗಳನ್ನೂ, ಉದ್ದೇಶಗಳನ್ನು ಅಸ್ಪಷ್ಟವಾಗಿಯಾದರೂ ಗುರುತಿಸಬಹುದು

## ೨. ಪುರಾಣಗಳ ವಿವಿಧ ಪ್ರಕಾರಗಳು

ಸೃಷ್ಟಿಕ್ರಮದ ಕಥೆಗಳು. ಮಾನವ ಹಾಗೂ ಪ್ರಾಣಿಗಳ ಉತ್ಪತ್ತಿ, ಆಕಾಶದ ನಕ್ಷತ್ರ-ಗ್ರಹಗಳ ಉತ್ಪತ್ತಿಯ ಕಥೆಗಳು, ಸ್ವರ್ಗ-ನರಕಗಳ ಕಥೆಗಳು, ಪ್ರಳಯದ ಕಥೆಗಳು ಮತ್ತು ವಿಧಿ ಕ್ರಮಗಳನ್ನು ರೂಪಿಸಿದ ಕಥೆಗಳು ಇವುಗಳಲ್ಲಿ ಮುಖ್ಯವಾದವು.

ಓಶಿಯಾನಿಯಾದ ಸೌರು ದ್ವೀಪದವರ ಸೃಷ್ಟಿಕಥೆ ಹೀಗಿದೆ: ಪ್ರಾಚೀನ ಕಾಲದಲ್ಲಿ ಸೂರ್ಯ-ಚಂದ್ರರಿರಲಿಲ್ಲ. ಆಗ ಒಂದು ಮುದಿ ಜೇಡಹುಳು ದೊಡ್ಡ ಶಂಖವನ್ನು ಕಂಡಿತು. ಅದರ ಎರಡು ಚಿಪ್ಪುಗಳ ಬಾಗಿಲನ್ನು ಮಾಟದ ಮೂಲಕ ತೆಗೆಯಿತು. ಅದರಲ್ಲಿದ್ದ ಶಂಖದ ಹುಳುವಿನಿಂದ ಚಂದ್ರನನ್ನು ಮಾಡಿತು. ಒಂದು ದೊಡ್ಡ ಹುಳ ಆಗ ಕಂಡಿತು. ಅದರ ಬೆವರಿನಿಂದ ಸಮುದ್ರವಾಯಿತು. ಚಿಪ್ಪಿನ ಮೇಲ್ಭಾಗವನ್ನೆತ್ತಲು ಅದು ಆಕಾಶವಾಯಿತು. ಎರಡನೆಯ ಶಂಖದ ಹುಳದಿಂದ ಸೂರ್ಯನನ್ನು ಮಾಡಿತು. ವಾಯುವ್ಯ ಬೋರ್ನಿಯೋ ಕಥೆಯ ಪ್ರಕಾರ ಎರಡು ಹಕ್ಕಿಗಳು ಸಮುದ್ರದಿಂದ ಎರಡು ತರದ ತತ್ತಿಗಳನ್ನು ತೆಗೆದು ಸೂರ್ಯ-ಚಂದ್ರರನ್ನು ಮಾಡಿದವು.

ನ್ಯೂಝೀಲಂಡದಲ್ಲಿ ಆಕಾಶದ ಹೆಸರು ರಂಗಿ. ಪಪ ಎಂಬುದು ಭೂಮಿ. ರಂಗಿ ಕತ್ತಲೆಯಲ್ಲಿ ಪಪವನ್ನು ಆಲಿಂಗಿಸಿ ಅವಳ ಮೇಲೆ ಮಲಗಿತ್ತು. ಅದರಿಂದ ದೇವತೆಗಳೂ ಮನುಷ್ಯರೂ ಹುಟ್ಟಿದರು. ದೇವತೆಗಳು ಭೂಮಿ-ಆಕಾಶಗಳ ಸಂಬಂಧವನ್ನು ತಪ್ಪಿಸಿದರು.

ಮೆಲನೇಶಿಯಾದ ಬೆಂಕ್ಸ್ ದ್ವೀಪಗಳಲ್ಲಿ ರಾತ್ರಿಯ ಉಗಮದ ಕಥೆ ಹೀಗಿದೆ : ಸೃಷ್ಟಿಕರ್ತ ಕ್ವೇಟ್ (Qwat) ಮನುಷ್ಯರು, ಹಂದಿಗಳು, ಬಂಡೆಗಳು ಹಾಗೂ ವೃಕ್ಷಗಳನ್ನು ಸೃಷ್ಟಿಮಾಡಿದಾಗ ಹಗಲು ಮಾತ್ರ ಇತ್ತು. ಕ್ವೇಟನು ಹಂದಿಯೊಂದನ್ನು ಬೇರೆ ದೇಶದಲ್ಲಿದ್ದ ಕತ್ತಲೆಗೆ ಕೊಟ್ಟು ತಮ್ಮ ದೇಶಕ್ಕೆ ಬರಬೇಕೆಂದು ಅದಕ್ಕೆ ಆಮಂತ್ರಣವಿತ್ತನು. ಆಮೇಲೆ ಸೂರ್ಯನು ಮುಳುಗುವ ಪದ್ಧತಿ ಪ್ರಾರಂಭವಾಯಿತು.

ಆಸ್ಟ್ರೇಲಿಯಾದ ವಿಶಿಷ್ಟಪ್ರಾಣಿ ಏಮು. ಅದರ ತತ್ತಿಯನ್ನು ಬಾನಿಗೆ ಒಗೆದಾಗ ಅಲ್ಲಿನ ಕಟ್ಟಿಗೆ ರಾಶಿಗೆ ಬೆಂಕಿಬಿದ್ದು ಸೂರ್ಯನ ಉತ್ಪತ್ತಿಯಾಯಿತು. ಅಂದಿನಿಂದ ಸೂರ್ಯನೂ, ಅವನ ಸೇವಕರೂ ಆಕಾಶದ ಕಟ್ಟಿಗೆರಾಶಿಗೆ ಬೆಂಕಿಹಚ್ಚಿ ಹಗಲನ್ನು ಮಾಡುತ್ತಾರೆ.

(ಗ್ರೀಕ್ ಕಥೆ) ಡುಕಾಲಿಯನ್ ಮತ್ತು (ಅವನ ಹೆಂಡತಿ) ಪಿರ್ಹಾ ಕಲ್ಲುಗಳನ್ನು ಹಿಂಬದಿಯಿಂದ ಒಗೆದಾಗ ಆ ಕಲ್ಲುಗಳೆಲ್ಲ ಮನುಷ್ಯರಾದರು. ಇಜಿಪ್ತದಲ್ಲಿ ಬೆಸಾರ ಎಂಬ ದೇವನ ಕಣ್ಣೀರಿನಿಂದ ಮನುಷ್ಯರು ಹುಟ್ಟಿದರು.

ಜಲಪ್ರಳಯದ ಕಥೆಗಳು ಹಲವಾರು ದೇಶಗಳಲ್ಲಿವೆ. ತೀರ ಪ್ರಾಚೀನವಾದ ಬೆಬಿಲೋನಿಯಾದ ಕಥೆಯೇ ಕ್ರಿ. ಪೂ. ಎರಡೂವರೆ ಸಾವಿರವರ್ಷಗಳಷ್ಟು ಹಿಂದಿನದು. ಭಾರತದ ಪುರಾಣ ಪರಂಪರೆಯಲ್ಲಿ ಜಲಪ್ರಳಯದ ಅನಂತರ ಸತ್ಯವ್ರತ ಮನು

ವೊಬ್ಬನೇ ಉಳಿದು ಅವನಿಂದ ಮಾನವಕುಲ ಉದ್ಭವಿಸಿತು. ಪ್ರಾಚೀನ ಲಿಥುವೇನಿಯನ್ನರು ಮಾನವರ ದುರ್ವರ್ತನೆಗೆ ಅಸಹ್ಯಪಟ್ಟು ದೇವರು ಗಾಳಿದೈತ್ಯನನ್ನು, ನೀರದೈತ್ಯನನ್ನು ಜಗತ್ತಿನ ನಾಶಮಾಡಲು ಕಳಿಸಿದನೆಂದು ಕಥೆಮಾಡಿದ್ದರು. ದೇವರು ಕೆಲವು ಹಣ್ಣಿನ ಚಿಪ್ಪುಗಳನ್ನು ಒಗೆದುದರಿಂದ ಅವುಗಳಲ್ಲಿ ಕೂತು ಕೆಲವು ಜನರು ಪಾರಾದರು.

ಸತ್ತವರನ್ನು ಭೂಮಿಯಲ್ಲಿ ಹೂಳುವ ಮೂಲಕ ಅವರ ವಾಸಸ್ಥಾನ ಭೂಮಿಯ ಕೆಳಗಿನ ಕತ್ತಲೆಯ ಲೋಕವೆಂದು ತಿಳಿಯುತ್ತಿದ್ದರು. ಆದರೆ ಮೊದಲು ಮನುಷ್ಯರು ಸಾಯುತ್ತಿರ ಲಿಲ್ಲವಂತೆ. ಆಫ್ರಿಕದ ನಿಗ್ರೋಗಳಲ್ಲಿ, ಮಸಾಯಿಜನರಲ್ಲಿ ಸಾವಿನ ಜನನದ ಕುರಿತಾಗಿ ಒಂದು ಅಪೂರ್ವ ಕಥೆಯಿದೆ. ದೇವರು ಸೃಷ್ಟಿಮಾಡಿದಾಗ ಮಾನವರಿಗೆ ಮರಣವೇ ಇಲ್ಲವೆಂದು ಹೇಳಿದ್ದನು. ಆದರೆ ಕಾಲಕ್ರಮದಲ್ಲಿ ಮನುಷ್ಯರ ಸಂಖ್ಯೆ ಅತಿಯಾಯಿತು. ಮರಣವು ಮನುಷ್ಯರೊಡನೆ ಜಗಳಮಾಡಿ ಅವರ ಆಹುತಿ ತೆಗೆದುಕೊಳ್ಳಲು ಹವಣಿಸಿತು. ಆದರೆ ದೇವರು ಎಚ್ಚರಿಕೆಯಿಂದ ಮನುಷ್ಯರನ್ನು ಕಾಯುತ್ತಿದ್ದುದರಿಂದ ಸಾವು ನೆಲದಡಿ ಸೇರಿತು. ಒಮ್ಮೆ ದೇವರಿಲ್ಲದ ಹೊತ್ತಿನಲ್ಲಿ ಮೃತ್ಯು ಒಬ್ಬ ಹೆಂಗಸನ್ನು ಹಿಡಿಯಿತು. ಆಗ ಸತ್ತವಳನ್ನು ಹೂಳಿದರು. ಕೆಲವು ದಿನಗಳ ಅನಂತರ ಹೂಳಿದ ಜಾಗದಲ್ಲಿ ಮಣ್ಣು ಮೇಲಕ್ಕೆ ಬರಹತ್ತಿತು. ಮುದುಕಿ ಜೀವದಿಂದ ಎದ್ದೇಳುವ ಸಮಯಕ್ಕೆ ಅವಳ ಒಬ್ಬ ಸೊಸೆ ನೋಡಿ

ಕುದಿಯುವ ನೀರನ್ನು ತಂದು ಅತ್ತೆಯ ಗೋರಿಯ ಮೇಲೆ ಚೆಲ್ಲಿದಳು. ಸುತ್ತಿಗೆಯಿಂದ ಬಡಿದು "ಸಾಯಿ, ಸಾಯಿ! ಸತ್ತವರು ಸತ್ತಂತೆಯೇ ಇರಬೇಕು" ಎಂದು ಕೂಗಿದಳು. ಮರುದಿನವೂ ಏಳುತ್ತಿದ್ದ ಮುದುಕಿಯನ್ನು ಮತ್ತೆ ಹಾಗೆಯೇ ಕೊಂದಳು. ಭೂಮಿಗೆ ತಿರುಗಿ ಬಂದ ದೇವರು 'ಮೃತ್ಯು ಮತ್ತೆ ಯಾವ ಮನುಷ್ಯರನ್ನೂ ಬಲಿತೆಗೆದುಕೊಳ್ಳದಂತೆ ಮಾಡುತ್ತೇನೆ' ಎಂದು ಅದನ್ನು ಹುಡುಕಿದನು. ಮೃತ್ಯು ಅತಿವೇಗದಿಂದ ಓಡಿ, ಇದಿರಿಗೆ ಬರುತ್ತಿದ್ದ ಒಬ್ಬ ಮುದುಕಿಯೊಡನೆ "ನನ್ನನ್ನು ಅಡಗಿಸು. ನಾನು ನಿನಗೆ ಪುರಸ್ಕಾರ ಕೊಡುತ್ತೇನೆ" ಎಂದಿತು. ಮುದುಕಿ ಕಂಕುಳಿನಲ್ಲಿ ಅದನ್ನು ಅಡಗಿಸಿದಳು. ಮೃತ್ಯು ಅವಳ ಹೊಟ್ಟೆಯನ್ನು ಸೇರಿತು. ದೇವರು ಅವಳು ಮೃತ್ಯುವನ್ನು ಕಂಡಿದ್ದಳೋ ಎಂದು ಕೇಳಿದರೂ ಅವಳು ಬಾಯಿಬಿಡಲಿಲ್ಲ. ದೇವರು ಸಿಟ್ಟಿನಿಂದ ಅವಳನ್ನು ಕೊಂದು, ಮೃತ್ಯುವನ್ನು ಅವಳ ಹೊಟ್ಟೆಯೊಳಗಿನಿಂದ ತೆಗೆಯಲು ನೋಡಿದನು. ಮೃತ್ಯು ಒಬ್ಬ ತರುಣಿ ಬರುತ್ತಿದ್ದುದನ್ನು ನೋಡಿ ಅವಳ ಹೊಟ್ಟೆಯನ್ನು ಸೇರಿತು. ದೇವರು ಇದರಿಂದ ಸಿಟ್ಟುಗೊಂಡು "ಮನುಷ್ಯರು ಮೃತ್ಯುವಿನ ಪಾಲಾಗಲಿ" ಎಂದು ನಿರ್ಧರಿಸಿದನು. (ಆಗಿನಿಂದಲೇ ಅತ್ತೆ ಸೊಸೆ ಜಗಳವು ಪ್ರಾರಂಭವಾಗಿರಬೇಕು!)

ನರಕಕ್ಕೆ ಹೋಗಿ ಸತ್ತವರ ಜೀವಗಳನ್ನು ಮರಳಿಪಡೆದ ಮಹಿಮಾವಂತರ ಪುರಾಣಕಥೆಗಳುಂಟು. ತನ್ನ ಗಂಡ ಎಡ್ಮೆಟಸನ ಸಾವನ್ನು ತಪ್ಪಿಸಲು ಅವನ ಬದಲಿಗೆ ಮಡಿದ

ಅಲ್ಸೆಸ್ಟಿಸಳನ್ನು ಹರಕ್ಯುಲಸನು ಪಾತಾಳದಿಂದ ತರುತ್ತಾನೆ. ಸಾಂದೀಪನಿಗುರುಗಳ ಪುತ್ರನು ಸಮುದ್ರದಲ್ಲಿ ಮುಳುಗಿ ಮರಣಹೊಂದಿದ್ದನು. ಕೃಷ್ಣನು (ಗುರುದಕ್ಷಿಣೆ ಕೊಡುವ-ದಕ್ಕಾಗಿ) ಮೊದಲು ವರುಣನ ಹತ್ತಿರ ಹೋಗಿ, ಆಮೇಲೆ ಅವನು ಯಮಲೋಕದಲ್ಲಿದ್ದಾನೆಂದು ವರುಣ ಹೇಳಲು ಯಮಲೋಕಕ್ಕೆ ಹೋಗಿ ಗುರುಪುತ್ರನನ್ನು ತರುತ್ತಾನೆ.

ತನ್ನ ನಿಪುಣ ವೀಣಾವಾದನದಿಂದ ದೇವತೆಗಳನ್ನು ಮೆಚ್ಚಿಸಿ ಒರ್ಫಿಯಸನು ಹಾವು ಕಚ್ಚಿ ಮಡಿದಿದ್ದ ತನ್ನ ಮಡದಿ ಯುರಿಡ್ಯಾಸಳನ್ನು ಪಾತಾಳದಿಂದ ತರುವದಕ್ಕೆ ಅವರ ಒಪ್ಪಿಗೆ ಪಡೆದು ಸತ್ತವರ ಲೋಕಕ್ಕೆ ಹೋಗುತ್ತಾನೆ. ಆದರೆ ಅವನ ಮಡದಿ ಹಿಂದೆಯೇ ಬರುವಳೋ ಎಂದು ತಿರುಗಿ ನೋಡಬಾರದು ಎಂಬ ಶರ್ತನ್ನು ಉಲ್ಲಂಘಿಸಿ ಹಿಂತಿರುಗಿ ನೋಡಿ ಅವಳನ್ನು ಪುನಃ ಕಳಕೊಳ್ಳುತ್ತಾನೆ.

ಸಾಂಕೇತಿಕ ಕಥೆಗಳೂ, ತಾತ್ವಿಕ ಕಥೆಗಳೂ ಅನೇಕ ಉಂಟು. ಬ್ರಹ್ಮನ ನಾಲ್ಕು ಮೋರೆಗಳು– ನಾಲ್ಕು ವೇದಗಳ ಸಂಕೇತಗಳು. ಅರ್ಧನಾರೀಶ್ವರ, ಕಾಲಿಯಮರ್ದನ ಇತ್ಯಾದಿ ಸಾಂಕೇತಿಕ ಕಥೆಗಳುಂಟು. ಕಾಲಿಯಮರ್ದನ ( ಐದು ಹೆಡೆಗಳುಳ್ಳ ಸರ್ಪ.) ಪಂಚೇಂದ್ರಿಯಗಳನ್ನು ನಿಗ್ರಹಿಸಿದುದರ ಸಂಕೇತವೆಂದು ಡಾ॥ ಭಗವಾನದಾಸರು ಅಭಿಪ್ರಾಯ ಪಡುತ್ತಾರೆ. ಅಮೃತಮಂಥನದ ಕಥೆ ತಾತ್ವಿಕ ರೂಪಕವೇ ಆಗಿದೆ. ಗಣಪತಿ–ಷಣ್ಮುಖರಲ್ಲಿ ಯಾರು ಶ್ರೇಷ್ಠರು ಎಂಬ ಕುರಿತು ಉಂಟಾದ ಸ್ಪರ್ಧೆಯಲ್ಲಿ ಷಣ್ಮುಖನು ಇಡೀ ಜಗತ್ತನ್ನು ತಿರುಗಿ ಬರುವದ

ರೊಳಗೆ ದೊಡ್ಡ ಹೊಟ್ಟೆಯ ಗಣಪನು ಜಗತ್ತನ್ನೇ ಧರಿಸಿದ ತಂದೆ-ತಾಯಿಯರ ಸುತ್ತು ತಿರುಗಿ ಕುಳಿತು ವಿಜಯಪಡೆದ ಕಥೆ ತಾತ್ವಿಕ ಕಥೆಯೇ ಆಗಿದೆ.

## ೮. ಉಪಸಂಹಾರ

"ಪುರಾಣದ ಪ್ರತೀಕಗಳು ಧರ್ಮಗಳ ಬುನಾದಿಗಳಾಗಿವೆ. ನಿಸರ್ಗದ ಶಕ್ತಿಗಳನ್ನು ವ್ಯಕ್ತಿರೂಪ ಅಥವಾ ಅವ್ಯಕ್ತದೇವತೆಗಳನ್ನಾಗಿ ಆರಾಧಿಸುವ ಮನೋವೃತ್ತಿಯು ವಿಮರ್ಶನಶಕ್ತಿಯಿಲ್ಲದ ಚಿಂತನಪರತೆಯಿಲ್ಲದ ಪ್ರಾಕ್ತನಮಾನವನು ಸೃಷ್ಟಿಸಿದ ಸ್ವೇಚ್ಛಾರಚನೆಗಳಲ್ಲ. ಪುರಾಣವು ಸತ್ಯಕ್ಕೆ ವಿರೋಧವಾದುದಲ್ಲ. ಪುರಾಣಕಲ್ಪನೆಯ ಹಿಂದೆ ಶ್ರೇಷ್ಠಸತ್ಯಗಳ ರಹಸ್ಯಗಳಿವೆ. ಆಧ್ಯಾತ್ಮಿಕ ಜೀವನದ ಮೂಲದರ್ಶನವಿದೆ." ಎಂದು ನಿಕೊಲಾಯಿ ಬರ್ಡೆಯೇವ್‌ರು ಬರೆಯುತ್ತಾರೆ. ಅವರು ಪ್ರೊಮಿಥಿಯಸ್ ಹಾಗೂ ಬ್ಯಾಬಲ್ಲಿನಲ್ಲಿ 'ಮಾನವನ ಪತನ' ಗಳ ಕಥೆಗಳನ್ನು ಉದಾಹರಿಸಿ "ಅವು ಮಾನವನ ನೈತಿಕ ಅಥವಾ ಆಧ್ಯಾತ್ಮಿಕ ಜೀವನಗಳಲ್ಲಿನ ಘಟನೆಗಳನ್ನು ನೈಸರ್ಗಿಕವಾಗಿ ವಿವರಿಸುತ್ತವೆ; ಮಾನವನ ಅಂತರಜ್ಞಾನವನ್ನು ನಾಟಕೀಯ ಪರಿಭಾಷೆಯಲ್ಲಿ ಚಿತ್ರಿಸುತ್ತವೆ." ಎಂದಿದ್ದಾರೆ.

ಈ ಮಾತುಗಳ ಹಿನ್ನೆಲೆಯಲ್ಲಿ ಮಹರ್ಷಿ ಅರವಿಂದರು ವೇದದ ಅರ್ಥಮೀಮಾಂಸೆಯನ್ನು ಮಾಡುವ ಪರಿಯನ್ನು

ನೋಡಬಹುದು. ನಿಸರ್ಗಪುರಾಣಸಿದ್ಧಾಂತಗಳಲ್ಲಿ ಹುರುಳಿದ್ದರೂ ಆಧ್ಯಾತ್ಮಿಕ ಅರ್ಥಗಳು ವೇದದಲ್ಲಿ ಅಡಕವಾಗಿವೆ. ಆಕಾಶದ ಪ್ರಕಾಶ ಪ್ರಾತಃಕಾಲಕ್ಕೆ ಮಾತ್ರ ಸಂಬಂಧಿಸದೆ ಆಧ್ಯಾತ್ಮಿಕ ಅರ್ಥವನ್ನು ಒಳಗೊಳ್ಳುತ್ತದೆ ವೇದದ 'ಗೋ' ಎಂಬುದು 'ಬೆಳಕು', 'ಆಕಳು' ಎಂಬ ಎರಡೂ ಅರ್ಥಗಳನ್ನೊಳಗೊಂಡಿದೆ. ಆ ಬೆಳಕು ದಿವ್ಯಜ್ಞಾನ, ವೇದದ ಆಕಾಶ ಮನಸ್ಸಿನ ಪ್ರತೀಕ. ಅಶ್ವವು ಪ್ರಾಣಶಕ್ತಿಯ ಸಂಕೇತ.

ವೃತ್ರ, ನಮುಚಿ, ಪಣಿ, ರಾಕ್ಷಸ ಇತ್ಯಾದಿಗಳು ಆತ್ಮನ ಐಕ್ಯಕ್ಕೆ ಪ್ರತಿಬಂಧಕವಾಗುವ ಶಕ್ತಿಗಳು; ಹೊರತು ನೀರನ್ನು ಅಪಹರಿಸಿದ ದ್ರಾವಿಡ ರಾಜರಲ್ಲ ಉಚ್ಚವಾದ ಶಿವಕ್ಕೂ ನೀಚವಾದ ಆಶೆಗಳಿಗೂ ಆಗುವ ಹೋರಾಟದ ಸಂಕೇತ. ಅವರೊಡೆಯನಾದ ಇಂದ್ರನ ಹೋರಾಟ–ಇಂದ್ರನು ಆತ್ಮಶಕ್ತಿಯ ಸಂಕೇತ. ಸೂರ್ಯ ಸತ್ಯದ ಪ್ರಭು. ವೇದದ ಮಹಾ ಸಾಗರವು ಹೃದಯ ಸಮುದ್ರ.

ವಿಷ್ಣು ಪ್ರಳಯದಲ್ಲಿ ಅನಂತಶಯನ ಮಾಡುವ ಕಲ್ಪನೆ ಇಂಥದೇ ಪ್ರತೀಕದ ಮೇಲೆ ನಿಂತಿದೆ. ಅನಂತ ಅಂದರೆ ದೇಶಕಾಲಗಳ ಮೇರೆಯಿಲ್ಲದವ (Infinite). ಈ ಪ್ರತಿಮೆ ತಾತ್ವಿಕ ರೂಪಕವೆಂಬುದು ಸ್ಪಷ್ಟವಿದೆ. ವಿಷ್ಣು ಅನಂತದ ಮೇಲೆ ಮಲಗಿದ್ದಾನೆ.

ದಸ್ಯುಗಳು ಕತ್ತಲೆಯ ಮಕ್ಕಳು, ಆಧ್ಯಾತ್ಮಿಕ ಪ್ರಭೆಯ ವೈರಿಗಳು. ದೇವತೆಗಳು ಸತ್ಯವನ್ನು ಪಡೆಯಲು ಸಹಾಯಕ

ವಾದ ದುಷ್ಟಶಕ್ತಿಗಳು. ಇಂದ್ರನು ಅಂತರಿಕ್ಷದ ಯುದ್ಧದಲ್ಲಿ ವಜ್ರಾಯುಧ (ಜ್ಞಾನವಜ್ರ) ದಿಂದ ಅವರನ್ನೋಡಿಸುತ್ತಾನೆ.

ಬೆಳಕು–ಕತ್ತಲೆ, ಸತ್ಯ ಅಸತ್ಯ, ಜ್ಞಾನ–ಅಜ್ಞಾನ, ಮರಣ ಅಮರತ್ವಗಳ ಹೋರಾಟದ ಪ್ರತೀಕವೇ ವೇದದ ಅರ್ಥ. ಯಜ್ಞವು ಮಾನವನಿಗೆ ದಿವ್ಯ ಪ್ರಕೃತಿಯನ್ನು ದಯಪಾಲಿಸುವ ಸಾಧನ.

ಪುರಾಣಗಳು ಪ್ರಾಚೀನ ಮಹಾಕಾವ್ಯಗಳ ಮಾತೃಕೆಗಳಾಗಿವೆ. ಗ್ರೀಸದ ಈಲಿಯಡ್, ಒಡಿಸಿ. ಇಂಗ್ಲಂಡದ ಬ್ಯೋವುಲ್ಫ್, ಮೆಸೊಪೊಟೆಮಿಯಾದ ಗಿಲ್‌ಗಮೇಶ ಮಹಾಕಾವ್ಯ, ವರ್ಜಿಲ್‌ನ ಈನೀಡ್, ಬ್ಯಾಬಲ್‌.ಕಥೆಗಳು. ಪರ್ಶಿಯದ ಫಿರ್ದೌಸಿಯ "ಶಹಾನಾಮೆ", ಗ್ರೀಸಿನ ಶ್ರೇಷ್ಠ ನಾಟಕಕಾರ ಈಸ್ಕಿಲಸ್, ಸೋಫೋಕ್ಲಿಸ್. ಯುರಿಪಿಡೀಸ್ ಮುಂತಾದವರ ಹಾಗೂ ಕಾಲಿದಾಸ. ಶೇಕ್ಸ್‌ಪಿಯರ್ ಮುಂತಾದ ನಾಟಕಕಾರರ ಕೃತಿಗಳು ಇತ್ಯಾದಿ ಶ್ರೇಷ್ಠ ಸಾಹಿತ್ಯರಚನೆಗಳಿಗೆ ಪುರಾಣಗಳು ತಳಹದಿಯಾಗಿವೆ.

ಪುರಾಣಗಳು ಪ್ರಾಚೀನವಾದರೂ ನಿತ್ಯನೂತನವಾಗಿವೆ. ಅವುಗಳಲ್ಲಿ ಎಂದಿಗೂ ಹಳೆಯದಾಗದ ಸತ್ಯಗಳು, ಮನೋ-ವೈಜ್ಞಾನಿಕ ತತ್ವಗಳು ತುಂಬಿವೆ. ಪ್ರತಿಯೊಬ್ಬ ಮಾನವನಲ್ಲಿಯೂ ಪುರಾಣಮಾನವ ನೆಲಸಿದ್ದಾನೆ. ಆದುದರಿಂದಲೇ ಎಂದೆಂದಿಗೂ ಈ ಪುರಾಣ ಕಥೆಗಳು ನೀಡುವ ಅಮೃತಸಂದೇಶದ ಧಾರೆಗಳು ಇಂದಿಗೂ ಅಪ್ಯಾಯಮಾನವಾಗುತ್ತವೆ. ಪುರಾಣ

ಗಳಲ್ಲಿ ಧರ್ಮಕಲ್ಪನೆ, ಸಮಾಜಜೀವನಗಳ ವಿಕಾಸ ಕಂಡು ಬರುತ್ತದೆ. ಪುರಾಣಗಳ ಭಾಷೆ ಕಾವ್ಯಮಯವಾದ ಸುಂದರ ರೂಪಕವಾಚಕವಾಗಿದೆ. ಜೀವನನಾಟ್ಯಸರಸ್ವತಿ ಪುರಾಣಭಾಷಾಮಯೂರವನ್ನೇರಿ ಕಂಗೊಳಿಸುತ್ತಾಳೆ. ಪುರಾಣ ಕಲ್ಪನೆಗಳು ಭಾಷೆಗಳಿಗೆ ಅನೇಕ ಅರ್ಥಪೂರ್ಣವಾದ ಶಬ್ದಮಾಣಿಕ್ಯ ಕೋಶಗಳನ್ನೊದಗಿಸಿವೆ. ಗತಕಾಲದ ಮಾನವ ಯಾತ್ರಿಕನ ಚಲನೆಯ ಎಲ್ಲ ಬಗೆಯ ಗುರುತುಗಳು ಪುರಾಣ ಮಹಾಪ್ರಸ್ಥಾನದಲ್ಲಿ ಕಂಡುಬರುತ್ತವೆ.

ಪುರಾಣಗಳಲ್ಲಿ ಅನಾಗರಿಕರೆಂದು ಬೀಳುಗಳೆಯುವ ಪ್ರಾಕ್ತನ ಸಾಮಾನ್ಯ ಮಾನವನ ಕಲ್ಪನೆಗಳಿಗೂ ಶ್ರೇಷ್ಠದಾರ್ಶನಿಕರ ಕಲ್ಪನೆಗಳಿಗೂ ತಾಳಮೇಳ ಕಾಣುತ್ತದೆ. ಮಾನವನ ಮಹಾಸಾಹಸ ಕಥೆಗಳನ್ನು ಪುರಾಣಗಳು ಬಿತ್ತರಿಸುತ್ತವೆ. ಮಾನವನು ದೇವತ್ವದ ನಿಚ್ಚಣಿಕೆಯನ್ನೇರಿ ದೇವನು ಮಾನವನ ಅವತಾರ ತಾಳಿದ ಮಹಿಮಾಮಯವಾದ ಸನ್ನಿವೇಶಗಳು ಪುರಾಣಗಳಲ್ಲಿವೆ. ಇಲ್ಲಿ ಮರ್ತ್ಯರು ಅಸುರರಿಗೆ ಹೆಗಲೆಣೆಯಾಗಿ, ಅಸುರರು ಮರ್ತ್ಯರ ನೆಂಟರಾಗಿದ್ದಾರೆ (ಕುವೆಂಪು). ಹರಕ್ಯುಲಿಸನು ಪ್ರೊಮಿಥಿಯಸನಂತಹ ದೇವತೆಯ ಬಂಧನವನ್ನು ಬಿಡಿಸುವ ಮಹಾಸಾಹಸ ಮಾಡುತ್ತಾನೆ. ಅರ್ಜುನ, ದಶರಥ, ಪುರೂರವರಂಥ ವೀರರು ದೇವಲೋಕಕ್ಕೆ ಹೋಗಿ ಇಂದ್ರನ ವೈರಿಗಳನ್ನು ನಾಶಮಾಡಿ ಬರುತ್ತಾರೆ. ಮಾನವನ ಪೌರುಷ ಸಾಧನೆಗಳು ಮಾನವ ಜೀವನದಲ್ಲಿ ಪರಮ ವಿಶ್ವಾಸವನ್ನೂ, ಮಾನವನ ಹಿರಿಮೆಯನ್ನೂ ಎತ್ತಿಹಿಡಿಯುತ್ತವೆ.

ಮಾನವ ತರುಣ ತರುಣಿಯರ ರೂಪಿನ ವೈಭವಕ್ಕೆ ಅನಿಮಿಷರ ಕಣ್ಣುಕುಕ್ಕಿ ಅವರು ಇವರಲ್ಲಿ ಮೋಹಗೊಳ್ಳುತ್ತಾರೆ. ಅಲ್ಲದೆ ವನಸ್ಪತಿ, ಕ್ರಿಮಿ-ಕೀಟ, ಪ್ರಾಣಿಗಳು, ಮನುಷ್ಯರು ಈ ಎಲ್ಲ ಜೀವಿಗಳಿಗೂ ಇರುವ ಸಹಯೋಗವನ್ನು ಈ ಕಥೆಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

---

# ಮುಖ್ಯ ಸಂದರ್ಭ ಗ್ರಂಥಗಳು

**English Books**

(1) The Outlines of Mythology— Lewis spence. Thinkers, Library, London, 1949; 2nd Edition.

(2) The Ancient Myths— Norma Lorre Goodrich. A mentor book, Ist Ed., 1960.

(3) The Greek Myths—Parts I&II—Robert Graves. Pelican original Penguin Books. Reprint of 1960 Ed.

(4) Sanskrit & Its Kindred Literatures-Laura Elizabeth Poor. C. Kegan Paul & Co., Peternoster Square, London, 1881.

(5) Hindu Culture & Personality—Philip Spratt. P. C. Manaktalas & Sons, Private Ltd., Bombay-1, 1966.

(6) Encyclopaedia of Mythology (Larousse), Batchworth Press Ltd., London, 1959.

(7) Celtic Myth & Legend—Charles square. The Gresham Publishing Co., London.

(8) Teutonic Myth & Legend—Donald A Mackenzie. The Gresham Publishing Co., London.

(9) Classic Myth & Legend— A. R. Hope Moncrief. The Gresham Publishing Co.,London.

(10) Mythology of the Aryan Nations George W. Cox. Chowkamba, Benares, 1963.

(11) The Origins of Religion—Lord Raglan-Thinkers' Library, London.

(12) Chips From A German Workshop Vol. II-Comparative Mythology, Max Muller,Longman's Green and Co., London, 1868.

(13) Indo-European Folktales & Greek Legend-W. R. Halliday, Cambridge University Press, 1933.

(14) The Myth of the Eternal Return Mireca Eliade,Bollingen Series XLVI,Pantheon.

(15) Introduction to a Science of Mythology. C. G. Jung & C. Karenyi, Routledge & Kegan Paul Ltd., London, 1951.

(16) Psychology & Alchemy —C. G. Jung, 2nd Edn., 1952. Pantheon Books.

(17) Lights on the Veda— Aurobindo, Pondicherry Ashram.

(18) Psychology of the Unconscious C. G.— Jung, Routledge & Kegan Paul, London, 1946.

(19) The Burning Fountain—Philip Wheelright— Indiana Press, New York.

(20) Humanity of Deity—Wilbur Marshall Urban, George Allen & Unwin, Ltd., London—1951.

(21) Gods and Goddesses in Art & Legend-Herman J. Wechsler, Pocket Book, 1950.

(22) The Bhakti Cult in Ancient India—Bhagavat Kumar Goswami, Chowkamba.

## Journals

(1) Journal of Indian History Aug. 1967. (Article by Dr. S. A. Dange, "Vergin and the Devine Seedlayer.")

## ಕನ್ನಡ

೧. ಮೆಸೊಪೊಟೇಮಿಯಾ ಸಾಹಿತ್ಯ- ಶ್ರೀಕೃಷ್ಣ ಚೈತನ್ಯ, ಗಾಂಧೀ ಸಾಹಿತ್ಯ ಸಂಘ, ಮಲ್ಲೇಶ್ವರಂ, ಬೆಂಗಳೂರು-೩,
—೧೯೫೮

— —

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

**ಬೆಲೆ: ಪ್ರತಿ ಒಂದಕ್ಕೆ ೨೫ ಪೈಸೆ**

೧. ಗರತಿಯರ ಹಾಡುಗಳಲ್ಲಿ ಕೌಟುಂಬಿಕ ಜೀವನ ಚಿತ್ರಣ
—ದೇವೇಂದ್ರ ಕುಮಾರಹಕಾರಿ

೨. ಮಾನವ ಮತ್ತು ಶಾಕಾಹಾರ —ಎ. ಎಸ್. ಧರಣೇಂದ್ರಯ್ಯ

೩. ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ
—ಎನ್. ಎ. ಪಾಟೀಲ

೪. ಜನಪದ ಸಾಹಿತ್ಯದಲ್ಲಿ ಮಾತೃವಾತ್ಸಲ್ಯ
—ಲೀಲಾವತಿ ತೋರಣಗಟ್ಟಿ

೫. ಜನಪದದಲ್ಲಿ ಮಕ್ಕಳ ಸಾಹಿತ್ಯ —ಸಂಗಮೇಶ ಎಂ. ಬಿರಾದಾರ

೬. ಪ್ರೇಮಚಂದರ ಸಣ್ಣಕಥೆಗಳು —ಬಿ. ಎಫ್. ಹಸರಾಣಿ

೭. ಕಬ್ಬು —ಎಂ. ರಾಮದಾಸ. ಕಾಮತ್

೮. ಕಾರವಾರ ಜಿಲ್ಲೆಯ ಶಾಸನಗಳು
ಆರ್. ಎನ್. ಗುರವ

೯. ಕನ್ನಡದಲ್ಲಿ ಸಾಂಗತ್ಯ ಸಾಹಿತ್ಯ
—ವೀರಣ್ಣ ರಾಜೂರ

---

**ವ್ಯಾಸಂಗವಿಸ್ತರಣ ಮತ್ತು ಪ್ರಕಟನ ವಿಭಾಗ**
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**